ಭಾರತೀಯ ಸಾಹಿತ್ಯದ ನಿರ್ಮಾಣಕಾರರು

# ಕಾಜಿ ನಜರುಲ್ ಇಸ್ಲಾಮ

ಇಂಗ್ಲಿಷ ಮೂಲ: **ಗೋಪಾಲ ಹಾಲದಾರ**

ಕನ್ನಡ ಅನುವಾದ: **ಪಿ. ವಿ. ಜೋಶಿ**



ಸಾಹಿತ್ಯ ಅಕಾದೆಮಿ

ನವ ದೆಹಲಿ

# ಅನುಕ್ರಮಣಿಕೆ

# ಪ್ರಸ್ತಾವನೆ

ಕಾಜೀ ನಜರುಲ್ ಇಸ್ಲಾಮ ತನ್ನ ಮಾತೃಭಾಷೆಯಾದ ಬಂಗಾಲಿಯಲ್ಲಿ ರಚಿಸಿದ ಗದ್ಯ ಪದ್ಯ ಹಾಡುಗಳನ್ನು ಬಂಗಾಲಿಯನ್ನು ತಿಳಿಯದ ಓದುಗರಿಗಾಗಿ ಪರಿಚಯಮಾಡಿಕೊಡುವ ಒಂದು ಅಲ್ಪ ಯತ್ನವನ್ನು ಈ ಕಿರುಹೊತ್ತಗೆಯಲ್ಲಿ ಮಾಡಲಾಗಿದೆ. ಇಪ್ಪತ್ತನೆಯ ಶತಮಾನದಲ್ಲಿ ಭಾರತದಲ್ಲಿ ಸೃಜನಶೀಲರಾದ ಕಲಾವಿದರೆನಿಸಿದವರ ಅಗ್ರಪಂಕ್ತಿಯಲ್ಲಿ ನಜರುಲ್ ಎಣಿಕೆಯಾಗಬೇಕು. ಇದು ಅವನ ಸಮಗ್ರವಾದ ಜೀವನ ಚರಿತ್ರವಲ್ಲ ಮತ್ತು ಅವನ ಎಲ್ಲ ಕೃತಿಗಳ ವಿಮರ್ಶೆಯೂ ಇದರ ಉದ್ದೇಶವಲ್ಲ. ಈ ಒಂದು ಚಿಕ್ಕ ಪ್ರಬಂಧದಲ್ಲಿ ಅವಕಾಶವಿರುವ ಮಟ್ಟಿಗೆ ಅವನ ಜೀವನ ಮತ್ತು ಕೃತಿಗಳನ್ನು ಅಂದಿನ ಸಮಕಾಲೀನ ಪರಿಸರದಲ್ಲಿ ಸಂಕ್ಷೇಪವಾಗಿ ವಿವರಿಸುವ ಯತ್ನವನ್ನು ಮಾಡಲಾಗಿದೆ. ಸಮಕಾಲೀನ ಹಿನ್ನೆಲೆಯಿಲ್ಲದೆ ಯಾವದೇ ಕಲಾವಿದನ ಕೃತಿಗಳ ವರ್ಣ ವಿಸ್ತಾರಗಳ ಸರಿಯಾದ ಕಲ್ಪನೆ ಬರಲಾರದು. ಈ ಯತ್ನವನ್ನು ನನ್ನ ಕೈಲಾದ ಮಟ್ಟಿಗೆ ವಸ್ತುನಿಷ್ಠವಾಗಿಯೂ ಯಾವದೇ ಪಕ್ಷಪಾತವಿಲ್ಲದೆಯೂ ಮಾಡಿದ್ದೇನೆ. ವಿವಾದಾಸ್ಪದವಾದ ಘಟನೆಗಳನ್ನು ಸೇರಿಸುವಲ್ಲಿ ಇಲ್ಲವೆ ಕೈಬಿಡುವಲ್ಲಿ ಮತ್ತು ಅವುಗಳನ್ನು ವಿವರಿಸುವಲ್ಲಿ ಈ ಮಾತನ್ನು ಹೇಳಬೇಕಾಗುತ್ತದೆ. ಹಾಗೆಯೇ ಅವನ ಒಂದು ಕೃತಿ ಇಲ್ಲವೆ ಒಟ್ಟು ಸಾಧನೆಯನ್ನು ಕುರಿತು ಹೇಳುವಾಗಲೂ ಅಷ್ಟೆ. ಬಂಗಾಲಿ ಸಾಹಿತ್ಯ ಮತ್ತು ಸಂಗೀತ ಪ್ರಪಂಚದಲ್ಲಿ ನಜರುಲ್ ವ್ಯಕ್ತಿತ್ವದ ಮತ್ತು ಅವನ ಕೃತಿಗಳ ಸ್ಥಾನವನ್ನು ಬಂಗಾಲಿಯನ್ನರಿಯದ ಓದುಗರಿಗೆ ತಿಳಿಸಿಕೊಡುವದಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಹೇಳುವದೇ ನನ್ನ ಮುಖ್ಯ ಉದ್ದೇಶವಾಗಿದೆ. ಇದನ್ನು ಓದಿದವರಲ್ಲಿ ಕೆಲವರಾದರೂ ತಮತಮಗೆ ಅವಕಾಶವಿರುವ ಮಟ್ಟಿಗೆ ನಜರುಲ್‌ನ ಮೂಲ ಕೃತಿಗಳ ಪರಿಚಯವನ್ನು ಪಡೆಯುವದಕ್ಕೆ ಯತ್ನಿಸಿದರೆ ಈ ನನ್ನ ಪ್ರಯತ್ನ ಸಫಲವಾದಂತೆ. ಮೂಲ ಕೃತಿಗಳ ಪರಿಚಯಕ್ಕೆ ಎಂತಹ ಸಮರ್ಥವಾದ ಅನುವಾದವೂ ಸರಿಯಾಗಲಾರದು. ಇಂತಹ ಒಂದು ಅಲ್ಪಸ್ಫೂರ್ತಿಯ ನಿಬಂಧ ಅದನ್ನು ಹೇಗೆ ಮಾಡೀತು!

ನಾನು ಮಾಡಿದ ಅನುವಾದಗಳು ಸಮರ್ಥವಾದುವೆಂದು ಹೇಳಿಕೊಳ್ಳುವಂತಿರದಿದ್ದರೂ, ಅಲ್ಲಲ್ಲಿ ಕೆಲವು ಪದ್ಯಗಳನ್ನು ಮೂಲ ಬಂಗಾಲಿಯಲ್ಲಿ ಉದಾಹರಿಸಿ ಇಂಗ್ಲಿಷಿನಲ್ಲಿ ಅವುಗಳ ಅರ್ಥಹೇಳುವದಕ್ಕೆ ಯತ್ನಿಸಿದ್ದೇನೆ. ಒಂದು ಸಾಹಿತ್ಯ ಕೃತಿಯನ್ನು ವಿವರಿಸುವಾಗ ಮೂಲವನ್ನು ಓದಲಾರದ ಓದುಗರು ಅದರಲ್ಲಿ ಏನಿದೆ ಎಂಬದನ್ನು ತಿಳಿಯುವ ಮಟ್ಟಿಗಾದರೂ ಇದು ಉಪಯುಕ್ತವೆನಿಸಬಹುದು. ಬಂಗಾಲಿ

ಮೂಲವನ್ನು ರೋಮನ್ ಲಿಪಿಯಲ್ಲಿ ಬರೆಯುವಾಗ ಸಾಧ್ಯವಿದ್ದಷ್ಟು ಕಡಮೆ ಉಚ್ಚಾರಭೇದಸೂಚಕ ಗುರುತುಗಳನ್ನು ಬಳಸಿದ್ದೇನೆ. ಅದರ ಸ್ಥೂಲವಾದ ಅರ್ಥ ವನ್ನು ಇಂಗ್ಲಿಷಿನಲ್ಲಿ ಹೇಳಿದ್ದೇನೆ.

ನಜರುಲ್ ಜೀವನ ಮತ್ತು ಕೃತಿಗಳನ್ನು ಕುರಿತು ಹೊಸ ಹೊಸ ಪುಸ್ತಕಗಳು ಎರಡೂ ಬಂಗಾಲಗಳಲ್ಲಿ ಪ್ರಕಟವಾಗುತ್ತಲೇ ಇವೆ. ಅವುಗಳಲ್ಲಿ ಎಷ್ಟೋ ಸಮರ್ಥ ವಾದ ಕೃತಿಗಳೂ ಇವೆ. ಆದರೆ ಅವೆಲ್ಲವೂ ಬಂಗಾಲಿ ಭಾಷೆಯಲ್ಲಿವೆ. ಒಂದೇ ಒಂದು ಅಪವಾದವೆಂದರೆ ಶ್ರೀ ಬಸುಧಾ ಚಕ್ರವರ್ತಿಯವರ ಇಂಗ್ಲಿಷ ಪ್ರಬಂಧ. ಇದು ಚಿಕ್ಕದಾಗಿದ್ದರೂ ಬಹು ಒಳ್ಳೆಯ ಗ್ರಂಥವಾಗಿದೆ, ಇದರ ಪ್ರಕಾಶಕರು ನ್ಯಾಶನಲ್ ಬುಕ್ ಟ್ರಸ್ಟ. ಇವರಲ್ಲಿ ಅನೇಕ ಲೇಖಕರಿಗೆ ನಾನು ಋಣಿಯಾಗಿದ್ದೇನೆ. ಶ್ರೀ ಚಕ್ರವರ್ತಿಯವರಲ್ಲದೆ ಇನ್ನಿಬ್ಬರ ಹೆಸರನ್ನಾದರೂ ನಾನು ಹೇಳಲೇಬೇಕು. ಘಟನೆ ಗಳನ್ನು ಪ್ರಾಮಾಣಿಕವಾಗಿ ವಿವರಿಸುವಲ್ಲಿ ಕಾಮ್ರೇಡ ಮುಜಪ್ಫರ ಅಹಮ್ಮದ ಅವರ ಗ್ರಂಥದಿಂದ ನಾನು ಬಹಳ ಸಹಾಯ ಪಡೆದಿದ್ದೇನೆ. ನಜರುಲ್ ಬರವಣಿಗೆ ಗಳ ವಿಚಾರದಲ್ಲಿ ನಾನು ಜನಾಬ ಅಜಹರುದ್ದೀನ ಖಾನ ಅವರಿಂದ ಬಹಳಷ್ಟು ಮಾಹಿತಿ ಯನ್ನು ಪಡೆದಿದ್ದೇನೆ. ಇವರಿಬ್ಬರಿಗೂ ಮತ್ತು ನಜರುಲ್ ಕುರಿತು ಬರೆದ ಇತರ ಎಲ್ಲ ಲೇಖಕರಿಗೂ ನಾನು ಮನಃಪೂರ್ವಕವಾಗಿ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ನಾನು ಸಾಹಿತ್ಯ ಅಕಾದೆಮಿಯವರಿಂದಲೂ ಕ್ಷಮೆಯನ್ನು ಕೇಳಬೇಕಾಗಿದೆ: ಮೊದಲನೆಯದಾಗಿ ಈ ನನ್ನ ಪ್ರಯತ್ನದಲ್ಲಿರಬಹುದಾದ ಅನೇಕ ನ್ಯೂನತೆಗಳಿಗಾಗಿ; ಅವುಗಳ ಅರಿವು ನನಗಿದೆ. ಎರಡನೆಯದಾಗಿ ಅವರು ನನಗೆ ಇದನ್ನು ಬರೆಯಲಿಕ್ಕೆ ಒಪ್ಪಿಸಿದ ತರುವಾಯದಲ್ಲಿ ಇದನ್ನು ಬರೆಯುವದರಲ್ಲಿ ನಾನು ಮಾಡಿದ ಅಕ್ಷಮ್ಯ ವಿಳಂಬಕ್ಕಾಗಿ; ಮತ್ತು ಕೊನೆಯದಾಗಿ ಟೈಪು ಮಾಡಿದ ಪ್ರತಿಯನ್ನು ಅಚ್ಚಿಗೆ ಸಿದ್ಧ ಗೊಳಿಸುವದರಲ್ಲಿಯೂ ಆದ ವಿಳಂಬಕ್ಕಾಗಿ.

26 ಮೇ 1972

# ಜೀವಂತ ತಳಕು

(ಲೇಖಕರು ಇದನ್ನು ಬರೆದಾಗ ನಜರುಲ್ ಜೀವಿಸಿದ್ದನು)

ಪ್ರಪಂಚದ ಮಟ್ಟಿಗೆ ಕಾಜೀ ನಜರುಲ್ ಇಸ್ಲಾಮ ಇದ್ದೂ ಇಲ್ಲದಂತೆಯೆ. ಇಂದು ಅಂದರೆ ಸನ್ 1973 ರಲ್ಲಿ ಅವನ 74 ನೆಯ ವಯಸ್ಸಿನಲ್ಲಿ ಅವನು ಶರೀರದಿಂದ ಮಾತ್ರ ಜೀವಿಸಿದ್ದರೂ ಅವನ ಪ್ರಾಯಕ್ಕಿಂತ ಹೆಚ್ಚು ಮುಪ್ಪಿನವನಂತೆ ಕಾಣಿಸುವುದಿಲ್ಲ. ಆದರೆ ವಿಧಿಯು ಅಣಕವೆಂಬಂತೆ ದುರ್ದಮ್ಯ ಚೇತನದ ಈ ಬಂಡುಗಾರ ಕವಿ ಕಳೆದ ಮೂವತ್ತು ವರ್ಷಗಳಿಂದ ಮನೋವೈಕಲ್ಯಕ್ಕೆ ಈಡಾಗಿದ್ದಾನೆ. ಆ ಗಾಢವಾದ ಮಬ್ಬಿನಿಂದಲೂ ಒತ್ತಾಯದ ಮೌನದಿಂದಲೂ ಬಿಡುಗಡೆಯೇ ಇಲ್ಲ. ಇನ್ನೊಂದು ರೀತಿಯಾಗಿ ನೋಡಿದರೆ, ನಜರುಲ್ ತನಗೆ ತಿಳಿಯದಂತೆಯೇ ವರ್ಷೇ ವರ್ಷೇ ಬೇರೆ ಬೇರೆ ಯುಗಗಳಲ್ಲಿ, ಬೇರೆ ಬೇರೆ ಜನಾಂಗಗಳಲ್ಲಿ, ಸಂಪರ್ಕವನ್ನು ಕಲ್ಪಿಸುವ ಜೀವಂತ ಬಳ್ಳಿಯಾಗಿ ಬೆಳೆಯುತ್ತಿದ್ದಾನೆ. ಬಂಗಾಲದ ಸಾಹಿತ್ಯ ಕಲೆಗಳು ಹೊಸ ಯುಗದಲ್ಲಿ ಕಾಲಿಟ್ಟಿವೆಯಾದರೂ ನಜರುಲ್ ಕೃತಿಗಳಿಂದ ಪ್ರೇರಣೆಯನ್ನು ಪಡೆಯುವದು ನಿಂತಿಲ್ಲ. ಅವನಿಗೆ ಸಲ್ಲುವ ಪ್ರೀತಿ ಆದರ ಕೃತಜ್ಞತೆಗಳು ಕಡಮೆಯಾಗಿಲ್ಲ. ಬಂಗಾಲಿ ಜನಗಳು, ನಜರುಲ್ ಜನಗಳು, ರಾಜಕೀಯವಾಗಿ ಎರಡು ಸ್ವತಂತ್ರ ದೇಶಗಳಲ್ಲಿ ವಿಭಕ್ತರಾಗಿದ್ದಾರೆ. ಆದರೆ ನಜರುಲ್ ವಾಣಿಯೂ ಅದರ ಹಿಂದಿರುವ ಘನವಾದ ಪ್ರೇರಣೆಯೂ ರಾಷ್ಟ್ರಗಳ ಎಲ್ಲೆಗಳನ್ನು ಗಮನಿಸುವದಿಲ್ಲ. ನಜರುಲ್‌ನೂ ಅವನ ಸೃಜನಶೀಲರಾದ ಸಹಕಾರ್ಯಕರ್ತರೂ ಆಳುವಂತಹ ಒಂದು ಪ್ರಜ್ಞಾಪ್ರಪಂಚದ ಏಕಾಧಿಪತ್ಯಕ್ಕೆ ಅವರೆಲ್ಲರೂ ಪ್ರಜೆಗಳಾಗಿದ್ದಾರೆ. ತನ್ನ ದುಃಸಹವಾದ ಮೌನದಲ್ಲಿ ಕೂಡ ನಜರುಲ್ ಜನತಾಯುಗದ ಹರಿಕಾರನಾಗಿದ್ದಾನೆ. ಬಂಗಾಲಿ ಜನಗಳು ಎಲ್ಲಿಯೇ ಇದ್ದರೂ ಅವರ ಸಾಂಸ್ಕೃತಿಕ ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ಅವಿಭಾಜ್ಯವಾದ ಮೂಲಧನವಾಗಿ ಸನ್ನಿಧಾನ ಪಡೆದಿದ್ದಾನೆ.

# 1. ಜನ್ಮ ಮತ್ತು ಪೂರ್ವ ವಯಸ್ಸು

ಮೊದಲಿದ್ದ ಅವಿಭಕ್ತ ಬಂಗಾಲ ದೇಶದ ಬರ್ದವಾನ ಜಿಲ್ಲೆಯ ಅಸಂಸೋಲ ಸಬ್ ಡಿವಿಜನ್ನಿನ ಚುರುಲಿಯಾ ಗ್ರಾಮದಲ್ಲಿ 25 ನೆಯ ಮೇ 1899 (11 ಜ್ಯೇಷ್ಠ 1306 ಬ.ಸ) ದಿನದಂದು ಕಾಜೀ ನಜರುಲ್ ಇಸ್ಲಾಮ ಹುಟ್ಟಿದನು. ಅವನು ಪ್ರಪಂಚದ ಬೆಳಕು ಕಂಡದ್ದು ಒಂದು ಬಡ ಮುಸಲ್ಮಾನ ಕುಟುಂಬದಲ್ಲಿ. ಅವನ ಪೂರ್ವಜರು ಪಟನಾದಿಂದ ಈ ಗ್ರಾಮಕ್ಕೆ ಕಾಜೀ ಪದವಿಯಲ್ಲಿ ಬಂದಿದ್ದರಂತೆ. ಮುಸಲ್ಮಾನರ ಆಳಿಕೆಯಲ್ಲಿ ಇದು ನ್ಯಾಯಾಧೀಶರ ಪದವಿಯಾಗಿತ್ತು. ಆ ಪದವಿಗೆ ಸೇರಿದ ಜಹಗೀರು ಮತ್ತು ಪ್ರಭಾವಗಳೇನಾದರೂ ಇದ್ದಿದ್ದರೆ ಅವು ಎಂದೋ ಕಳೆದು ಹೋಗಿ ಈ ಕವಿಯ ಜನ್ಮದ ಕಾಲಕ್ಕೆ ಕಾಜೀ ಎಂಬದು ಬರಿಯ ಅಡ್ಡ ಹೆಸರಾಗಿ ಉಳಿದಿತ್ತು. ನಜರುಲ್‌ನ ತಂದೆ ಕಾಜೀ ಫಕೀರ ಅಹಮದ ಬಡವನಾಗಿದ್ದನು. ಅವನಿಗಿದ್ದ ಮೂರು ಜನ ಹೆಣ್ಣು ಒಬ್ಬ ಗಂಡು ಮಕ್ಕಳಲ್ಲಿ ನಜರುಲ್ ಎರಡನೆಯವನಾಗಿದ್ದನು. ಕವಿಯ ತಂದೆಯು ಈ ಮೊದಲೇ ಅನೇಕ ಜನ ಮಕ್ಕಳನ್ನು ಕಳೆದುಕೊಂಡ ಕಾರಣ ಅವನು ಕವಿಯನ್ನು 'ದುಖೂ' ಎಂಬ ರೂಢಿಯ ಹೆಸರಿನಿಂದ ಕರೆದನು. ಮನೆಯವರೆಲ್ಲ ಅವನನ್ನು ಇದೇ ಹೆಸರಿನಿಂದ ಕರೆಯುತ್ತಿದ್ದರು. ದುಖೂನಿಗೆ ಎಂಟನೆಯ ವಯಸಿನಲ್ಲಿಯೇ ಪಿತೃ ವಿಯೋಗವಾಯಿತು. ಆದರೆ ಅವನಲ್ಲಿ ಹುದುಗಿದ್ದ ಆನಂದ ಹಾಸ್ಯಗಳ ಬುಗ್ಗೆ ಬಲವಾಗಿದ್ದ ಕಾರಣ ಅವನಿಗಾದ ದುಃಖವು ಹೆಚ್ಚು ಕಾಲ ಬಾಧಿಸಲಿಲ್ಲ. ನಜರುಲ್‌ನಿಗೆ ಜನನಕಾಲಕ್ಕೆ ತಾರಾಖ್ಯಾಪನೆಂಬ ಇನ್ನೊಂದು ಹೆಸರನ್ನೂ ಇಟ್ಟಿದ್ದರಂತೆ. ಏಕೆಂದರೆ ಅವನ ತಾಯಿಯು ಆ ಹೆಸರಿನ ತಾಂತ್ರಿಕ ಸಿದ್ಧನಿಗೆ ಗಂಡು ಮಗುವಿಗಾಗಿ ಹರಕೆ ಹೊತ್ತು ಇವನನ್ನು ಪಡೆದಿದ್ದಳಂತೆ. ತಾರಾಪೀಠವೆಂಬ ಆ ಸಿದ್ಧನ ಸ್ಥಾನವು ಬೀರಭೂಮ ಜಿಲ್ಲೆಯಲ್ಲಿದೆ. ಅದೇನಿದ್ದರೂ, ನಜರುಲ್‌ನ ತಾಯಿ ಮತ್ತು ಅವಳ ಕುಟುಂಬದಲ್ಲಿ ತಾಂತ್ರಿಕ ಆಚಾರಗಳಲ್ಲಿ ಶ್ರದ್ಧೆಯಿದ್ದಿತೆಂದು ತೋರುತ್ತದೆ.

ಚುರೂಲಿಯದಲ್ಲಿ ಸಾಂಪ್ರದಾಯಿಕವಾದ ಮಕತಾಬ ಒಂದನ್ನು ಬಿಟ್ಟರೆ ಪಾಠಶಾಲೆಯೂ ಇರಲಿಲ್ಲ. ಅಲ್ಲಿ ಸುಲಭವಾದ ಪಾರ್ಸಿ ಅರಬೀ ಭಾಷೆಗಳನ್ನು ಮಾತ್ರ ಕಲಿಸುತ್ತಿದ್ದರು. ಅಲ್ಲಿ ಗುರುಗಳಾಗಿದ್ದ ಕಾಜೀ ಫಜಲ್ ಎ ಅಹಮದ ಎಂಬವರಿಂದ ಸ್ವಭಾವತಃ ಚುರುಕಾಗಿದ್ದ ಈ ಹುಡುಗನು ತನ್ನ ವಯಸಿಗೆ ಹೆಚ್ಚೇ ಎನ್ನಿಸುವಷ್ಟು ಪ್ರಭುತ್ವವನ್ನು ಈ ಎರಡು ಭಾಷೆಗಳಲ್ಲಿ ಪಡೆದನು. ತನ್ನ ಹತ್ತನೆಯ ವಯಸಿನಲ್ಲಿಯೇ ಈ ಮಕತಾಬಿನಲ್ಲಿಯ ಪ್ರಾಥಮಿಕ ಪರೀಕ್ಷೆಯನ್ನು ಪೂರೈಸಿ ಸುಮಾರು ಒಂದು ವರ್ಷದಷ್ಟು ಕಾಲ ಅಲ್ಲಿಯೇ ಕಲಿಸುವ ಕೆಲಸವನ್ನೂ ಮಾಡಿದನು. ಗ್ರಾಮದ ಎಲ್ಲ

ಮಕ್ಕಳಂತೆ ಅವನೂ ಸಹಜವಾಗಿಯೇ ಶ್ರದ್ಧಾವಂತನಾದ ಮುಸಲ್ಮಾನನಾಗಿದ್ದನು. ಮತ್ತು ಆ ಕಾಲದಲ್ಲಿ ಸಾಮಾನ್ಯವಾಗಿದ್ದಂತೆ ಅಷ್ಟೇ ಸಹಜವಾಗಿ ಬಂಗಾಲಿಯಲ್ಲಿ ಪ್ರಚಾರದಲ್ಲಿದ್ದ ರಾಮಾಯಣ ಮಹಾಭಾರತ ಮೊದಲಾದ ಹಿಂದುಗಳ ಪುರಾತನ ಕೃತಿಗಳನ್ನೂ ಸಹ ಅಷ್ಟೇ ಪ್ರೀತಿಯಿಂದಲೂ ಶ್ರದ್ಧೆಯಿಂದಲೂ ಓದುತ್ತಿದ್ದನು. ಹಾಗೆಯೇ ಆ ಸರಕರೆಯಲ್ಲಿ ಬರುತ್ತಿದ್ದ ಹಾಜೀ ಪಹಲವಾನನಂತಹ ಫಕೀರರು, ಸಾಧುಗಳು, ಬಾವಲರು, ಸೂಫಿಗಳು, ದರವೇಶರು, ಯಾರೇ ಬಂದರೂ ಅಲ್ಲಿ ಸೇರಿದವರೊಳಗೆ ಈ ಹುಡುಗನೂ ಇರುತ್ತಿದ್ದನು. ಆ ಧಾರ್ಮಿಕ ಒಲವು ಸಹಜ ವಾಗಿತ್ತು. ಆದರೆ ಅದಕ್ಕೂ ಹೆಚ್ಚು ಅರ್ಥವತ್ತಾಗಿದ್ದದ್ದು ಲೌಕಿಕ ವಿಷಯಗಳಲ್ಲಿ ಆಗಲೇ ಅವನು ತೋರಿಸುತ್ತಿದ್ದ ಬಹುಮಟ್ಟಿನ ಅನಾಸಕ್ತಿ. ತನ್ನ ಪ್ರಾಪಂಚಿಕ ಕೆಲಸಗಳನ್ನು ಸರಿಯಾಗಿ ನೋಡಿಕೊಳ್ಳುವುದನ್ನು ನಜರುಲ್ ಎಂದೂ ಕಲಿಯಲೇ ಇಲ್ಲ. ಅವನು ಅಜಾಗರೂಕನಾಗಿದ್ದುದಲ್ಲದೆ, ಕೆಲವು ವಿಚಾರಗಳಲ್ಲಿ ದುಂದುಗಾರನೂ ಆಗಿದ್ದುದಲ್ಲದೆ, ಅವನ ಹೆಸರಿನಲ್ಲಿಯ ಖ್ಯಾಪ ಎಂಬ ಪದವು ಹೇಳುವಂತೆ ನಿರಂಕುಶನೂ ಸ್ವತಂತ್ರವೃತ್ತಿಯುವನೂ ಆಗಿದ್ದನು. ಹಾಗಿದ್ದರೂ ಅವನ ಉಲ್ಲಾಸ ವೃತ್ತಿಯು ಆಕರ್ಷಕವಾಗಿತ್ತು. ಹುಡುಗುತನದ ಚೇಷ್ಟೆಗಳಲ್ಲಿಯೂ ಗ್ರಾಮ್ಯಗೀತಗಳನ್ನು ಹಾಡು ವುದರಲ್ಲಿಯೂ ಅವನು ಮುಂದಾಗಿರುತ್ತಿದ್ದನು. ಗ್ರಾಮದಲ್ಲಿಯ ಲೇತೊ ತಂಡಗಳತ್ತ ಅವನ ಒಲವು ಹೆಚ್ಚಾಗಿತ್ತು. ಅವನಿಗೆ ಪಾಠಶಾಲೆಗಳಲ್ಲಿ ಕ್ರಮವಾದ ಶಿಕ್ಷಣಕ್ಕೆ ಅವಕಾಶವಿಲ್ಲದಿದ್ದುದೂ ಇದಕ್ಕೆ ಕಾರಣವಾಗಿರಬಹುದು. (ಶಬ್ದಶಾಸ್ತ್ರಾನುಸಾರವಾಗಿ ಲೇತೋ ಎಂಬ ಪದವು ನಾಟಕ ಎಂಬುದರಿಂದ ಬಂದದ್ದು.) ಆ ಸೀಮೆಯ ಹಳ್ಳಿಗಳಲ್ಲಿ ತರಜ ಎಂದು ಕರೆಯಲಾಗುತ್ತಿದ್ದ ಗಾಯಕರ ತಂಡಗಳಿರುತ್ತಿದ್ದವು. ಬಂಗಾಲದಲ್ಲಿ ಹೆಚ್ಚು ಪರಿಚಿತವಾಗಿದ್ದ ತರಜ ಮತ್ತು ಕವೀರದಲ ಎಂಬ ತಂಡಗಳಂತೆಯೇ ಇವೂ ಒಂದನ್ನೊಂದು ಎದುರಿಸಿ ಹಾಡುಗಾರಿಕೆ ಮತ್ತು ಚತುರೋಕ್ತಿಗಳಲ್ಲಿ ಏರಾಟಗಳನ್ನು ನಡೆಸುತ್ತಿದ್ದವು. ಇಂತಹ ಪ್ರತಿಯೊಂದು ತಂಡದಲ್ಲಿಯೂ ಗೋದಾಕವಿ ಎಂದು ಕರೆಯಲಾಗುತ್ತಿದ್ದ ಒಬ್ಬ ನಾಯಕ ಕವಿಯು ಹಾಡುಗಾರನಲ್ಲದೆ ಹಾಸ್ಯಗಾರನೂ ಆಗಿರುತ್ತಿದ್ದನು. ಇಂತಹ ತಂಡಗಳು ಏರಾಟಕ್ಕೆ ನೆರೆದಲ್ಲಿ ಒಂದು ಪಾರ್ಟಿಯವರು ಹೇಳಿದ ಹಾಡುಗಳಿಗೆ ಉತ್ತರವಾಗಿ ಇನ್ನೊಂದು ಪಾರ್ಟಿಯವರು ಹೇಳಬೇಕಾದ ಹಾಡುಗಳನ್ನು ಈ ಗೋದಾಕವಿ ಅಲ್ಲಿಯೇ ನಿರ್ಮಿಸಿ ಹೇಳಬಲ್ಲ ಆಶುಕವಿಯಾಗಿರ ಬೇಕಿತ್ತು. ನಜರುಲ್‌ನ ಚಿಕ್ಕಪ್ಪನೊಬ್ಬನು ಆ ಗ್ರಾಮದ ಲೇತೋಬಂದ್‌ನಲ್ಲಿ ಸದಸ್ಯ ನಾಗಿದ್ದನು. ಅವನಿಂದಾಗಿ ನಜರುಲ್‌ಗೂ ಅದರಲ್ಲಿ ಪ್ರವೇಶ ದೊರೆಯಿತು. ಹದಿನಾಲ್ಕು ವಯಸ್ಸಿನ ಹೊತ್ತಿಗೆ ಆಗಲೇ ನಜರುಲ್ ತನ್ನದೇ ಒಂದು ಪಾರ್ಟಿಯ ನಾಯಕ ನಾಗಿದ್ದನು. ಅವನ ಕೆಲವು ಲೇತೋಹಾಡುಗಳು ಉಳಿದುಬಂದಿವೆ (ಅಜಹರುದ್ದೀನ ಖಾನ್ ಅವರ 'ಬಂಗಸಾಹಿತ್ಯೇ ನಜರುಲ್', ಬ. ಸ. 1363, ಪು. 6-8). ಗ್ರಾಮ ಜೀವನದಲ್ಲಿಯೂ ಗ್ರಾಮೀಣ ಸಂಸ್ಕೃತಿಯಲ್ಲಿಯೂ ನಜರುಲ್ ಸ್ಫೂರ್ತಿಯ ಮೂಲವು ಇವುಗಳಲ್ಲಿ ಕಂಡು ಬರುವದಲ್ಲದೆ ಆಶ್ಚರ್ಯಕರವಾದ ವಸ್ತು ವೈವಿಧ್ಯವೂ ಬಂಗಾಲಿ ಹಾಡುಗಾರಿಕೆಯ ರಾಗತಾಳಗಳ ಮೇಲೆ ಅವನಿಗೆ ಸಹಜವಾಗಿದ್ದ ಹಿಡಿತವೂ

ಇವುಗಳಲ್ಲಿ ಕಂಡು ಬರುತ್ತದೆ. ಆದ್ದರಿಂದ ತರುವಾಯದಲ್ಲಿ ನಜರುಲ್ ರಚಿಸಿದ ಗೀತೆಗಳು ಯಾವದೋ ಸೀಮೆಯ ಬೆಳೆ ಎನ್ನುವದಕ್ಕೆ ಆಸ್ಪದವೇ ಇಲ್ಲ. ಲೇತೋ ಪ್ರದರ್ಶನಗಳು ವರ್ಷದಲ್ಲಿ ಕೆಲವು ತಿಂಗಳು ಮಾತ್ರ ನಡೆಯುತ್ತಿದ್ದವು. ಒಂದು ಸುಗ್ಗಿಯ ಬೆಳೆ ಕೆಟ್ಟರೆ ಆ ವರ್ಷ ತಂಡದ ಆದಾಯವು ಕುಗ್ಗುತ್ತಿತ್ತು. ನಜರುಲ್‌ಗೂ ಅಷ್ಟೇ.

ಕೊನೆಗೆ ನಜರುಲ್ ಗ್ರಾಮವನ್ನು ಬಿಟ್ಟು ರೇಲ್ವೆ ಜಂಕಶನ್ನೂ ಕಲ್ಲಿದ್ದಲು ಗಣಿಗಳ ಕೇಂದ್ರವೂ ಆಗಿದ್ದ ಅಸನ್‌ಸೋಲ್‌ಗೆ ಹೋದನು. ಅಲ್ಲಿ ಮೊದಲಿಗೆ ಅವನು ಒಬ್ಬ ರೇಲ್ವೆಗಾರ್ಡನ ಹತ್ತಿರ ಮನೆಗೆಲಸ ಮಾಡಿಕೊಂಡಿದ್ದನು. ಸ್ವಲ್ಪ ದಿನಗಳಲ್ಲಿಯೇ ಅದನ್ನು ಬಿಟ್ಟು ಒಬ್ಬ ರೊಟ್ಟಿತಯಾರಿಸುವವನಲ್ಲಿ ಕೆಲಸ ಕಲಿಯುವದಕ್ಕೆ ನಿಂತನು. ಕೆಲಸದಿಂದ ಬಿಡುವು ದೊರೆತಾಗ ಅದೇ ಅಂಗಡಿಯಲ್ಲಿ ಕುಳಿತು ಹಾಡುವದಕ್ಕೂ ಕೊಳಲು ನುಡಿಸುವದಕ್ಕೂ ಅನುವು ದೊರೆಯುತ್ತಿತ್ತು. ಉಲ್ಲಾಸಿಯಾದ ಈ ಯುವಕನ ಸುತ್ತಲೂ ಜನಗಳು ಸೇರತೊಡಗಿದರು. ಹೀಗೆ ಆ ಹುಡುಗನ ಚೂಟಿತನದಿಂದ ಆಕರ್ಷಿತರಾದವರಲ್ಲಿ ಆ ಸ್ಥಳದಲ್ಲಿ ಪೊಲೀಸ ಸಬ್‌ಇನ್‌ಸ್ಪೆಕ್ಟರಾಗಿದ್ದ ರಫೀಜುಲ್ಲಾ ಎಂಬವರೊಬ್ಬರಿದ್ದರು. ಆತನು ನಜರುಲ್‌ನನ್ನು ಮೈಮನ್‌ಸಿಂಗ ಜಿಲ್ಲೆಯಲ್ಲಿದ್ದ ತನ್ನ ಸ್ವಗ್ರಾಮಕ್ಕೆ ಕರೆದುಕೊಂಡು ಹೋದನು. ಅದು ಈಗ ಬಂಗಲಾ ದೇಶದಲ್ಲಿದೆ. ಅಲ್ಲಿ ಅವನಿಗೆ ದರಿಯಾ—ರಾಂಪುರ ಹೈಸ್ಕೂಲ್‌ನಲ್ಲಿ ಫೀ ಇಲ್ಲದೆ ಓದುವದಕ್ಕೆ ಪ್ರವೇಶ ದೊರೆಯಿತು. ಆದರೆ ಗ್ರಾಮದ ಮಕ್ಕಳೊಡನೆ ದಾರಿಯ ಹೊಲಗಳಲ್ಲಿ ಆಡುವದರಲ್ಲಿಯೂ ಅವರೊಡನೆ ಆಡುತ್ತ ತಂಬಾಕು ಸೇದುತ್ತ ಹೊತ್ತುಗಳೆಯುವದರಲ್ಲಿಯೂ, ಅವರೊಡನೆ ಮೀನು ಹಿಡಿಯುವದಕ್ಕೆ ಹೋಗುವದರಲ್ಲಿಯೂ, ತನ್ನ ಆಶುಕವಿತ್ವದಿಂದ ಅವರನ್ನು ನಗಿಸಿ ನಲಿಯುವದರಲ್ಲಿಯೂ ನಜರುಲ್ ಪಡೆಯುತ್ತಿದ್ದ ಆನಂದ ಅವನಿಗೆ ಪಾಠಶಾಲೆಯಲ್ಲಿ ದೊರೆಯಲಿಲ್ಲವಂತೆ. ಒಂದು ವಾರ್ಷಿಕ ಪರೀಕ್ಷೆಯಲ್ಲಿ ಬಂಗಾಲಿ ಭಾಷಾ ಪ್ರಶ್ನಪತ್ರಿಕೆಗೆ ಬರೆಯಬೇಕಾಗಿದ್ದ ಉತ್ತರಗಳನ್ನು ಈ ತರುಣ ಕವಿಯು ಅಲ್ಲಿಯೇ ರಚಿಸಿದ ಪದ್ಯಗಳಲ್ಲಿ ಬರೆದಿದ್ದನೆಂದು ಹೇಳುತ್ತಾರೆ. ಇನ್ನುಳಿದ ವಿಷಯಗಳಲ್ಲಿ ಇಂತಹ ಅವಕಾಶವಿಲ್ಲದೆಹೋದ ಕಾರಣ ನಜರುಲ್‌ನ ಉತ್ತರ ಪತ್ರಿಕೆ ಖಾಲಿಯಾಗಿತ್ತಂತೆ. ಅಲ್ಲಿಗೆ ಆ ಪಾಠಶಾಲೆಯ ಸಂಬಂಧ ತೀರಿತು. ಪಾಠಶಾಲೆಯಲ್ಲಿ ಕ್ರಮವಾದ ಶಿಕ್ಷಣ ಪಡೆಯಬೇಕೆಂಬ ಅವನ ಬಯಕೆ ಉತ್ಕಟವಾಗಿದ್ದರೂ ಖರ್ಚಿಗೆ ಹಣವಿಲ್ಲದೆ ಅವನು ಶಾಲೆಯನ್ನು ಬಿಡಬೇಕಾಯಿತೆಂಬದು ಹೆಚ್ಚು ವಿಶ್ವಸನೀಯವೆಂದು ತೋರುತ್ತದೆ.

ಅಸನ್‌ಸೋಲಿಗೆ ತಿರುಗಿ ಬಂದ ಮೇಲೆ ಅವನು ಮಾಥರೂನ ಎಂಬಲ್ಲಿ ಹೈಸ್ಕೂಲಿಗೆ ಸೇರಿದನು. ಅಲ್ಲಿ ಕವಿಯೆಂದು ಪ್ರಸಿದ್ಧಿಪಡೆದ ಕುಮುದರಂಜನ ಮಲ್ಲಿಕ್ ಎಂಬವರು ಮುಖ್ಯಾಧ್ಯಾಪಕರಾಗಿದ್ದರು. ಕಾಸಿಂಬಜಾರ (ಮುರ್ಶಿದಾಬಾದ)ನ ಉದಾರಿಯಾದ ಜಮೀನುದಾರ ಮಹಾರಾಜಾ ಮಣೀಂದ್ರಚಂದ್ರ ನಂದಿ ಎಂಬವರು ಈ ಪಾಠಶಾಲೆಯನ್ನು ನಡೆಸುತ್ತಿದ್ದರು. ಇಲ್ಲಿ ಉಚಿತ ಪ್ರವೇಶವೂ ಇನ್ನಿತರ ಸವಲತ್ತುಗಳೂ ದೊರೆಯಬಹುದೆಂಬ ಆಶೆ ನಜರುಲ್‌ಗಿದ್ದಿತು. ಇದಾವುದೂ ಇಲ್ಲಿ

ದೊರೆಯದ ಕಾರಣ ಅವನು ಸಿಯರಸೋಲ್ ಜಮೀನುದಾರಿಗೆ ಸೇರಿದ ರಾಣೀಗಂಜ (ಬರದ್ವಾನ)ನಲ್ಲಿಯ ಸಿಯರಸೋಲ್ ಹೈಸ್ಕೂಲಿಗೆ ಸೇರಿದನು. ಸಿಯರಸೋಲ್ ರಾಜರ ಪರಂಪರೆ ಪ್ರಾಚೀನವಾದದ್ದು. ಇಲ್ಲಿ ಅವನಿಗೆ ಅದೃಷ್ಟವೊಲಿದು ನಿಶ್ಶುಲ್ಕ ಅಭ್ಯಾಸಕ್ಕೆ ಅವಕಾಶ ದೊರೆತದ್ದಲ್ಲದೆ ಮುಸ್ಲಿಮ ಹಾಸ್ಟೆಲಿನಲ್ಲಿ ಉಚಿತವಾಗಿ ಊಟ ವಸತಿಗಳೂ ದೊರೆತವು. ಇದಲ್ಲದೆ ತಿಂಗಳೊಂದಕ್ಕೆ ಏಳು ರೂಪಾಯಿಗಳ ವಿದ್ಯಾರ್ಥಿ ವೇತನವೂ ದೊರೆಯಿತು. ಎಂಟನೆಯ ಕ್ಲಾಸಿನಲ್ಲಿ ಅವನು ಬಹು ಬುದ್ಧಿವಂತನೆಂದು ಹೆಸರುಗಳಿಸಿದ್ದಲ್ಲದೆ, ಅವನು ಮನಸುಮಾಡಿದಾಗಲೆಲ್ಲ ಅವನ ಕೈಯಲ್ಲಿಯೇ ಇದ್ದ ಮೊದನೆಯ ಸ್ಥಾನವನ್ನೂ ಪಡೆದನು. ಅದರಿಂದಾಗಿ ಅವನು ಒಂದೇ ನೆಗೆತಕ್ಕೆ ಇಮ್ಮಡಿ ಬಡತಿಯನ್ನು ಗಳಿಸಿ ಎಂಟನೆಯ ವರ್ಗದಿಂದ ಒಮ್ಮೆಲೇ ಹತ್ತನೆಯ ವರ್ಗಕ್ಕೆ ಏರಿದನು. ಆ ಶಾಲೆಯ ಪಾಠಕ್ರಮದಲ್ಲಿ ಅದೇ ಕೊನೆಯ ವರ್ಷವಾಗಿತ್ತು. ಅದೇ ಕಾಲದಲ್ಲಿ ಅದೇ ರಾಣೀಗಂಜ ಊರಿನಲ್ಲಿ ಇನ್ನೊಂದು ಪಾಠಶಾಲೆಯಲ್ಲಿ ಓದುತ್ತಿದ್ದ ಶೈಲಜಾನಂದ ಮುಖ್ಯೋಪಾಧ್ಯಾಯ ಮುಂದೆ ಬಂಗಾಲದಲ್ಲಿ ಕತೆಗಾರ ರೆಂದೂ ಕಾದಂಬರಿಕಾರರೆಂದೂ ಖ್ಯಾತಿಯನ್ನು ಪಡೆದರು. ಸಾಹಿತ್ಯದಲ್ಲಿ ಸಮಾನಾಭಿ ರುಚಿಯಿಂದ ಮೊದಲಾದ ನಜರುಲ್ ಶೈಲಜಾನಂದರ ಪರಿಚಯವು ಮುಂದೆ ಅವರಿಬ್ಬ ರಲ್ಲಿ ಜೀವಮಾನದ ಮೈತ್ರಿಯಾಗಿ ಬೆಳೆಯಿತು. ಆಶ್ಚರ್ಯವೆಂದರೆ ಆಗ ನಜರುಲ್ ಬರೆಯುತ್ತಿದ್ದದ್ದು ಗದ್ಯ ಮಾತ್ರ. ಶೈಲಜಾನಂದ ಬರೆಯುತ್ತಿದ್ದದ್ದು ಪದ್ಯ. ಆದರೆ ಅವರಿಬ್ಬರೂ ಪ್ರಸಿದ್ಧರಾಗುವ ಹೊತ್ತಿಗೆ ಈ ಪಾತ್ರಗಳು ಅದಲು ಬದಲಾಗಿದ್ದವು.

ಇದೇ ಸುಮಾರಿಗೆ ನಜರುಲ್ ಜೀವನದಲ್ಲಿ ಬೇರೆ ವ್ಯಕ್ತಿಗಳ ಪ್ರಭಾವವೂ ಪ್ರವೇಶಿಸಿತು. ಅವನ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದ ನಿಬಾರಣಚಂದ್ರ ಘಟಕ್ ಎಂಬವರು "ಯುಗಾಂತರ"ವೆಂಬ ಹೆಸರಿನ ಗುಪ್ತಕ್ರಾಂತಿಕಾರಿ ದಳಕ್ಕೆ ಸೇರಿದವ ರಾಗಿದ್ದರು. ಕ್ರಾಂತಿಕಾರಿಗಳಿಗೆ ಸೇರಿದ ಕೋವಿ ಸಿಡಿಗುಂಡುಗಳನ್ನು ಬಚ್ಚಿಟ್ಟು ಕೊಂಡ ಅಪರಾಧಕ್ಕಾಗಿ ಜೈಲುವಾಸವನ್ನನುಭವಿಸಿದ ಬಂಗಾಲಿ ಮಹಿಳೆಯರಲ್ಲಿ ಮೊದಲನೆಯವಳು ಈ ನಿಬಾರಣಚಂದ್ರನ ಅತ್ತೆ ದುಕಾರೀದೇವಿ. ನಮ್ಮ ಈ ಚರಿತ್ರೆಗೆ ಪ್ರಸ್ತುತವಾದದ್ದೆಂದರೆ ಈ ಅಧ್ಯಾಪಕನು ನಜರುಲ್‌ನ ಪ್ರತಿಭೆ ಉತ್ಸಾಹಗಳನ್ನು ಗುರುತಿಸಿ ಅವನಲ್ಲಿ ಆತ್ಮೀಯತೆಯನ್ನು ತೋರಿಸಿದ್ದು. ಅದು ಮೊದಲನೆಯ ಮಹಾ ಯುದ್ಧದ ಕಾಲ (1914-18). ಭಾರತದ ಬಿಡುಗಡೆಗಾಗಿ ಶಸ್ತ್ರವನ್ನೆತ್ತುವದಕ್ಕೆ ಕ್ರಾಂತಿಕಾರಿಗಳು ಆತುರರಾಗಿದ್ದರು. ಬ್ರಿಟನ್ನಿಗೆ ಬಂದ ಆಪತ್ಕಾಲವೇ ತಮ್ಮ ಚಟುವಟಿಕೆಗಳಿಗೆ ಆಯುತವಾದ ಕಾಲವೆಂದು ಕ್ರಾಂತಿಕಾರಿಗಳು ಬಗೆದರು. ಈ ಸಂಕ್ರಾಂತಿಕಾಲದಲ್ಲಿ ಬ್ರಿಟಿಶ ಆಳರಸರಿಗೂ ಭಾರತದಲ್ಲಿ ಹೆಚ್ಚುಹೆಚ್ಚಾಗಿ "ತೋಫಿನ ಬಾಯಿಗೆ ಬಲಿ"ಗಳನ್ನು ಕಲೆಹಾಕುವ ಅವಶ್ಯಕತೆಯಿದ್ದಿತು. ಅವರ ಮಾತಿನಲ್ಲಿ ಬಂಗಾಲಿಗಳನ್ನು "ಅಸೈನಿಕ ಜನಾಂಗ"ವೆಂದು ಗುರುತಿಸಿದ್ದ ಕಾರಣ ಬಂಗಾಲಿ ಗಳಿಗೆ ಸೈನ್ಯದಲ್ಲಿ ಪ್ರವೇಶ ದೊರೆತಿರಲಿಲ್ಲ. ಈ ಆಪತ್ಕಾಲಕ್ಕೆ ಆಳರಸರು "ಪ್ರಯೋಗ ವೆಂದು" ಬಂಗಾಲಿ ಜನಗಳ ಒಂದು "ಡಬಲ್ ಕಂಪನಿ"ಯನ್ನು ಸಜ್ಜುಗೊಳಿಸಿದರು. ಇದಕ್ಕೇ ಮುಂದೆ "49ನೆಯ ಬಂಗಾಲಿ ರೆಜಿಮೆಂಟ್" ಎಂಬ ಹೆಸರು ಬಂದಿತು.

ನಜರುಲ್‌ಗೆ ಆಗ ಕೇವಲ ಹದಿನೆಂಟರ ವಯಸ್ಸು. ಸೇನೆಯಲ್ಲಿ ಪ್ರವೇಶಿಸುವದಕ್ಕೆ ಒದಗಿದ ಈ ಅವಕಾಶದ ಲಾಭವನ್ನು ಪಡೆದು, ಸ್ವಾತಂತ್ರ್ಯ ಸಂಗ್ರಾಮದ ಯಶಸ್ಸಿಗೆ ಅವಶ್ಯವಾದ ಸೈನಿಕ ತರಬೇತಿಯನ್ನು ಪಡೆಯುವದಕ್ಕೆ ನಜರುಲ್‌ನನ್ನು ಅವನ ಕ್ರಾಂತಿಕಾರಿ ಮಿತ್ರರು ಪ್ರೋತ್ಸಾಹಿಸಿದರು. ಬಹುಶಃ ನಜರುಲ್‌ಗೆ ಹೆಚ್ಚಿನ ಪ್ರೋತ್ಸಾಹದ ಅವಶ್ಯಕತೆಯಿರಲಿಲ್ಲ; ಅವನಲ್ಲಿ ಮನೆಮಾಡಿದ್ದ ಸ್ವಾತಂತ್ರ್ಯ ಪ್ರೀತಿಯೇ ಸಾಕಾಗಿತ್ತು. ಆದರೂ ಇವನ ಸಹಜ ಒಲವಿಗೆ ಒಂದು ಗುರಿಯನ್ನು ತೋರಿಸಿ ಅದಕ್ಕೆ ಹಾದೀ ಮಾಡಿಕೊಟ್ಟವನು ನಿಬಾರಣ ಘಟಕ್ ಎಂಬುದರಲ್ಲಿ ಸಂದೇಹವಿಲ್ಲ. ನಜರುಲ್ ಹೃದಯದಲ್ಲಿ ಈ ಪ್ರೇರಣೆ ಶಾಶ್ವತವಾಯಿತು. ದಿನಗಳೆದಂತೆ ಅದರ ಆಳ ವಿಸ್ತಾರಗಳು ಹೆಚ್ಚಾದುವು. ಅವನ ಬರವಣಿಗೆಯ ಉಚ್ಛ್ರಾಯ ಕಾಲದಲ್ಲಿ ಅವನ ಚೈತನ್ಯವು ಬಹುಮುಖವಾಗಿ ಹರಿದರೂ ಅವನ ಸ್ಫೂರ್ತಿಯಲ್ಲಿ ಎಲ್ಲಕ್ಕೂ ಹೆಚ್ಚಾಗಿ ಸ್ವಾತಂತ್ರ್ಯದ ಹಂಬಲ ಮತ್ತು ಕ್ರಾಂತಿಕಾರಿಯ ದೇಶಾಭಿಮಾನಗಳು ಎದ್ದು ಕಾಣುತ್ತಿದ್ದವು.

ಯಾವ ಕಲಾವಿದನಿಗಾದರೂ ತನ್ನ ಸಮಕಾಲೀನ ಜೀವನದ ಪ್ರಭಾವದ ಹೊರಗಿರುವುದು ಸಾಧ್ಯವಿಲ್ಲ. ಸ್ವಾತಂತ್ರ್ಯ ಸಂಗ್ರಾಮವು ಪ್ರಬಲಿಸುತ್ತಿದ್ದ ಕಾಲ ದಲ್ಲಿ ಯಾವನೇ ಬರಹಗಾರನು "ಸಂಗ್ರಾಮದ ಹೊರಗೆ" ನಿಂತು ನೋಡುವದು ಅಸ್ವಾಭಾವಿಕವಾದದ್ದು. ನಜರುಲ್ ಮಟ್ಟಿಗೆ ಅವನು ತನ್ನ ಸಿಯರಸೋಲ್ ದಿನಗಳಿಂದಲೂ ತನ್ನನ್ನು ಈ ಪಕ್ಷಕ್ಕೆ ಅರ್ಪಿಸಿಕೊಂಡಿದ್ದನು. ಮುಂಬರುವ ಇಪ್ಪತ್ತು ಇಪ್ಪತ್ತೈದು ವರ್ಷಗಳು ಮಾತ್ರವಲ್ಲ, ಅವನ ಮನೋವ್ಯಾಪಾರ ಕುಸಿಯುವ ಕಾಲದವರೆಗೂ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಹಿನ್ನೆಲೆಯುಲ್ಲಲ್ಲದೆ ಕಾಜೀ ನಜರುಲ ಇಸ್ಲಾಮನ ಜೀವನದ ಮತ್ತು ಕಾವ್ಯದ ಬೆಳವಣಿಗೆಯನ್ನು ಸರಿಯಾಗಿ ಗ್ರಹಿಸುವುದು ಸಾಧ್ಯವಿಲ್ಲ.

ಅಂತೂ ಸನ್ 1917 ರಲ್ಲಿ ನಜರುಲ್ ತನ್ನ ಪಾಠಕ್ರಮದ ಕೊನೆಯ ವರ್ಷದಲ್ಲಿ ಪಾಠಶಾಲೆಗೆ ಶರಣು ಹೊಡೆದು "ಡಬಲ್ ಕಂಪನಿ"ಯಲ್ಲಿ ಸೇರಿಕೊಂಡನು. ಸ್ವಲ್ಪ ಕಾಲದಲ್ಲಿಯೇ ಅವನನ್ನು ಆಂದಿನ ವಾಯುವ್ಯಸರಹದ್ದಿನ ಪ್ರಾಂತದಲ್ಲಿದ್ದ ನೌಶೇರಾ ಎಂಬಲ್ಲಿಗೆ ಕಳಿಸಿದರು. ಅಲ್ಲಿಂದ ಅವನು ತನ್ನ ರೆಜಿಮೆಂಟಿನೊಡನೆ ಕರಾಚಿಗೆ ಹೋಗಿ 1917 ರಿಂದ 1919 ವರೆಗೆ ಅಲ್ಲಿಯೇ ಇದ್ದನು. ಸನ್ 1919 ರಲ್ಲಿ ಯುದ್ಧವು ಮುಗಿಯಲು ಬಂಗಾಲಿ ರೆಜಿಮೆಂಟು ವಿಸರ್ಜಿತವಾಯಿತು. ಈ ಅವಧಿಯಲ್ಲಿ ನಜರುಲ್ ಹವಿಲ್ದಾರ ಪದವಿಗೇರಿ ತನ್ನ ರೆಜಿಮೆಂಟಿನ ಕ್ವಾರ್ಟರಮಾಸ್ಟರ ಹುದ್ದೆಯಲ್ಲಿದ್ದನು. ಅವನ ಕಾವ್ಯಶಕ್ತಿಗಿಂತಲೂ ಹೆಚ್ಚಾಗಿ ಅವನ ತೆರೆದ ಮನಸು, ಅವನು ತನ್ನ ಸಂಗಡಿಗರಲ್ಲಿ ತೋರುತ್ತಿದ್ದ ಉದಾರವಾದ ಪ್ರೀತಿ, ಅವನು ಹಾಡುತ್ತಿದ್ದ ಹಾಡುಗಳು, ಕರಾಚಿಯ ಬರಾಕುಗಳಲ್ಲಿ ಅವನೊಡನೆ ಇದ್ದವರಿಗೆಲ್ಲ ಪ್ರಿಯವಾಗಿದ್ದವು. ಇದರಲ್ಲಿ ನಜರುಲ್ ನಿಗೂ ಆದ ಪ್ರಯೋಜನವೆಂದರೆ ಆ ದಂಡಿಗಾಗಿ ನಿಯುಕ್ತನಾಗಿದ್ದ ಪಂಜಾಬಿ ಮೌಲವಿಯೊಬ್ಬನಿಂದ ಪರ್ಸಿಯನ್ ಭಾಷೆ ಮತ್ತು ಪರ್ಸಿಯನ್ ಕಾವ್ಯದಲ್ಲಿ ತನಗಿದ್ದ ಗತಿಯನ್ನು ವಿಸ್ತರಿಸಿಕೊಂಡನು. ತನಗೆ ಸ್ಫೂರ್ತಿಬಂದಾಗಲೆಲ್ಲಾ ಅವನು

ಗದ್ಯ ಪದ್ಯ ಗೀತಗಳನ್ನು ಬರೆಯುತ್ತಿದ್ದನು. ಅವನು ಕೈಕೊಂಡ ಅನೇಕ ಕೃತಿಗಳಲ್ಲಿ ಹಾಫಿಜ ಕವಿಯ ರುಬೈಯಾತುಗಳನ್ನು ಭಾಷಾಂತರಿಸುವದೂ ಒಂದಾಗಿದ್ದಿತು. ಆದರೆ ಇದನ್ನು ಮುಗಿಸಿ ಪ್ರಕಟಿಸಬೇಕಾದರೆ ಬ. ಸ. 1337 (ಸನ್ 1930) ವರೆಗೆ ಕಾಯಬೇಕಾಯಿತು.

ಸುಮಾರು ಇದೇ ಅವಧಿಯಲ್ಲಿ ಅವನು ಬರೆದ ಒಂದು ಕತೆ ಬೌಂದಲೇರ ಆತ್ಮಕಥಾ (ಉಂಡಾಡಿಗುಂಡನ ಆತ್ಮಕಥೆ) ಮುದ್ರಣವನ್ನು ಕಂಡ ಅವನ ಮೊದಲ ನೆಯ ಕತೆಯೆಂದು ಹೇಳುತ್ತಾರೆ. ಇದರಲ್ಲಿ ತುಸುಮಟ್ಟಿಗೆ ಅವನ ಸ್ವಂತ ಜೀವನದ ಛಾಯೆಯೂ ಕಾಣುತ್ತದೆನ್ನುತ್ತಾರೆ. ಮೌಲವಿ ನಸೀರುದ್ದೀನ ಎಂಬವರು ಕಲಕತ್ತೆ ಯಿಂದ ಪ್ರಕಟಿಸುತ್ತಿದ್ದ ಸೌಗತ ಎಂಬ ಪತ್ರಿಕೆಯ ಜ್ಯೇಷ್ಠ 1326 (1919) ರ ಸಂಚಿಕೆಯಲ್ಲಿ ಇದು ಪ್ರಕಟವಾಯಿತು. ಈ ಸೌಗತ ಪತ್ರಿಕೆಗೆ ಸಾಹಿತ್ಯ ಪ್ರಪಂಚದಲ್ಲಿ ತಕ್ಕಮಟ್ಟಿಗೆ ಒಳ್ಳೆಯ ಸ್ಥಾನವಿದ್ದಿತು. ಬಂಗೀಯ ಮುಸಲ್ಮಾನ ಸಾಹಿತ್ಯಸಮಿತಿಯ ವತಿಯಿಂದ ತ್ರೈಮಾಸಿಕವಾಗಿ ಹೊರಡುತ್ತಿದ್ದ ಬಂಗೀಯ ಮುಸಲ್ಮಾನ ಸಾಹಿತ್ಯ ಪತ್ರಿಕೆಯ ಶ್ರಾವಣ 1326 (July-August 1919) ಸಂಚಿಕೆಯಲ್ಲಿ "ಮುಕ್ತಿ" ಎಂಬ ಕಥನಕಾವ್ಯವು ಪ್ರಕಟವಾಯಿತು. ಕವಿಯು ಇದಕ್ಕೆ ಮೊದಲು ಕೊಟ್ಟ ಹೆಸರು "ಕ್ಷಮಾ." ಸಂಪಾದಕರು ಅದನ್ನು ಬದಲಿಸಿ "ಮುಕ್ತಿ" ಎಂದು ಕರೆದ ದ್ದನ್ನು ಕವಿಯು ಆಮೇಲೆ ಒಪ್ಪಿದನು. ಇದು ನಜರುಲ್‌ನ ಕವಿತೆಗಳಲ್ಲಿ ಮೊಟ್ಟ ಮೊದಲಿಗೆ ಪ್ರಕಟವಾದ ಕವಿತೆ. ಇದಕ್ಕೂ ಒಂದು ಸತ್ಯಕತೆಯೇ ಆಧಾರವಾಗಿತ್ತು. ಇದರಲ್ಲಿ ಬರುವ ರಾಣೀಗಂಜ ನಗರದ ಒಂದು ಭಾಗದ ವರ್ಣನೆಯು ಯಥಾ ವತ್ತಾಗಿರುವದು ಎದ್ದು ಕಾಣುತ್ತದೆ. ಒಬ್ಬ ಫಕೀರನ ಜೀವನ ಮತ್ತು ಅದರ ಅಂತ್ಯಗಳೇ ಇದರ ಕಥಾವಸ್ತು. ಆ ಫಕೀರನ ಅನುಗ್ರಹದಿಂದ ಒಂದು ಒಣ ಗಿದ ಮರ ಮತ್ತೆ ಚಿಗುರಿದ ಪವಾಡ ಇದರಲ್ಲಿದೆ. ಇದರ ಲಲಿತ ಗತಿಯುಳ್ಳ ಪ್ರಾಸಬದ್ಧವಾದ ಚರಣಗಳಲ್ಲಿ ಕವಿಯ ಸಹಜ ಸಾಮರ್ಥ್ಯವು ಎದ್ದು ಕಾಣು ವಂತಿದೆ. ಇದರಲ್ಲಿ ಅರ್ಥವತ್ತಾದ ಅಂಶ ಇನ್ನೂ ಒಂದಿದೆ. ಚಿಕ್ಕಂದಿನಿಂದಲೂ ನಜರುಲ್‌ಗೆ ಪವಾಡಗಳಲ್ಲಿಯೂ ಧರ್ಮದ ನಿಗೂಢ ಶಕ್ತಿಯಲ್ಲಿಯೂ ನಂಬಿಗೆ ಇದ್ದಿತೆಂಬದೂ ಇಲ್ಲಿ ಕಾಣುತ್ತದೆ. ಕರಾಚಿಯಿಂದ ಕಳಿಸಿದ ಈ ಕವಿತೆಯು ಪುನಃ ನಜರುಲ್‌ಗೆ ಅಂದಿನ ಖ್ಯಾತ ಕಮ್ಯೂನಿಸ್ಟ ಮುಂದಾಳು ಕಾ. ಮುಜಫರ್ ಅಹಮದ ರೊಡನೆ ಸಂಪರ್ಕವನ್ನು ಕಲ್ಪಿಸುವ ಸಾಧನವಾಯಿತು. ಮುಜಫರ್ ಅಹಮದ ತಾವೇ ಸಂಪಾದಕರಾಗಿರದಿದ್ದರೂ ಬಂಗೀಯ ಮುಸಲ್ಮಾನ ಸಾಹಿತ್ಯ ಸಮಿತಿಯ ಮತ್ತು ಅದರ ಪತ್ರಿಕೆಯ ಜೀವನಾಡಿಯಾಗಿದ್ದರು.

ಇದಕ್ಕೆ ಮುಂಚೆಯೇ ಮುಜಫರ ಸಾಹೇಬರು ಈ ಕವಿಯೊಡನೆ ಪತ್ರ ವ್ಯವಹಾರದಲ್ಲಿ ಸಂಪರ್ಕ ಬೆಳಸಿದ್ದಿರಬಹುದು. ಅವರಿಗೆ ಸಾಹಿತ್ಯದಲ್ಲಿ ಸೂಕ್ಷ್ಮವಾದ ಪರಿಜ್ಞಾನವಿದ್ದಿತು. ಈ "ಕ್ಷಮಾ" ಎಂಬ ಕವಿತೆಯನ್ನು ನೋಡುತ್ತಲೇ ಹೊಸ ದೊಂದು ನಕ್ಷತ್ರವು ಕ್ಷಿತಿಜದ ಮೇಲೆ ಮೂಡಿ ಬರುವುದೆಂದು ಅವರು ಕಂಡರು. ಸ್ವಲ್ಪವೂ ತಡಮಾಡದೆ ಅವರು ಪತ್ರಿಕೆಯ ವತಿಯಿಂದ ನಜರುಲ್‌ಗೆ ಬರೆದು ಹೊಸ

ಹೊಸ ಕೃತಿಗಳನ್ನು ಕಳಿಸುವಂತೆ ಕೇಳಿಕೊಂಡರು. ಇದು ಒಂದು ಘನಿಷ್ಠವಾದ ಮತ್ತು ಶಾಶ್ವತವಾದ ಮೈತ್ರಿಗೆ ಬುನಾದಿಯಾಯಿತು. ಬಂಗಾಲದಲ್ಲಿ ಮಾತ್ರವಲ್ಲದೆ ಇಂಡಿಯದಲ್ಲಿಯೇ ಸ್ಪಷ್ಟವಾಗಿ ಕಮ್ಯೂನಿಸ್ಟ ಸಿದ್ಧಾಂತಕ್ಕೆ ಒಲಿದ ಕವಿಯೆಂದು ನಜರುಲ್ ಬೆಳವಣಿಗೆಯಲ್ಲಿ ಈ ಮೈತ್ರಿಯ ಪಾತ್ರ ದೊಡ್ಡದು. ಮುಜಫರ್ ಅಹಮ್ಮದರ 'ಕಾಜೀ ನಜರುಲ್ ಇಸ್ಲಾಮ—ನೆನಪುಗಳು' (1967-69) ಎಂಬ ಬರಹವು ಮೂರನೆಯ ಮತ್ತು ನಾಲ್ಕನೆಯ ದಶಕಗಳಲ್ಲಿ ಕವಿಯ ಜೀವನದ ಅನೇಕ ಘಟನೆಗಳ ಮತ್ತು ಸಂದೇಹಗಳ ಮೇಲೆ ಉಪಯುಕ್ತವಾದ ಬೆಳಕು ಬೀರುತ್ತದೆ.

ಬಂಗೀಯ ಮುಸ್ಲಿಮ ಸಾಹಿತ್ಯ ಪತ್ರಿಕೆಯು ಆ ಕಾಲದಲ್ಲಿ ನಜರುಲ್ ಕೃತಿಗಳನ್ನು ಬೆಳಕಿಗೆ ತರುವ ಸಾಧನವಾಯಿತು. ಆಗಸ್ಟ 1919 ರಲ್ಲಿ ಹೇನಾ ಮತ್ತು ಬ್ಯಥಾರದಾನ ಎಂಬ ಎರಡು ಕತೆಗಳು ಒಂದರ ಹಿಂದೊಂದರಂತೆ ಈ ಸಂಚಿಕೆಗಳಲ್ಲಿ ಪ್ರಕಟವಾದವು. ಇವೆರಡರಲ್ಲಿ ಬ್ಯಥಾರದಾನ (ನೋವು ಸಲ್ಲಿಸಿದ ಕಾಣಿಕೆ) ಎಂಬ ಕತೆಯು ಹೆಚ್ಚು ಅರ್ಥಗರ್ಭಿತವಾಗಿತ್ತು. ಈ ಎರಡು ಕತೆಗಳಿಂದಾಗಿ ಆ ಪತ್ರಿಕೆಯ ಓದುಗರಲ್ಲಿ ಮತ್ತು ವಿಶೇಷವಾಗಿ ಸುಶಿಕ್ಷಿತ ಮುಸಲ್ಮಾನ ತರುಣರಲ್ಲಿ ನಜರುಲ್ ಹೆಸರು ಆದರಕ್ಕೆ ಪಾತ್ರವಾಯಿತು. ಮುಂದೆ ಸಾಹಿತ್ಯ ಪ್ರಪಂಚದಲ್ಲಿ ಖ್ಯಾತಿಯನ್ನು ಪಡೆಯಲಿದ್ದ ಮೌಲವಿ ಕಾಜೀ ಅಬ್ದುಲ ವದೂದ, ಅಬುಲ್‌ಕಲಾಮ ಶಮಸುದ್ದೀನ ಮೊದಲಾದವರು ನಜರುಲ್‌ಗೆ ಸಮೀಪದ ಗೆಳೆಯರಾದರು. ಡಿಸೆಂಬರ 1919 ರಲ್ಲಿ ಬಂಗಾಲಿಯಲ್ಲಿ ಪ್ರಮುಖ ಸಾಹಿತ್ಯ ಪತ್ರಿಕೆಯಾಗಿದ್ದ "ಪ್ರಬಾಸಿ" (ಪೌಷ 1320) ಯಲ್ಲಿ ಒಂದು ಹಾಫೀಜ ರುಬೈಯಾತಿನ ಭಾಷಾಂತರ ಪ್ರಕಟವಾಯಿತು. ಅದನ್ನು ಆಯ್ಕೆಗೆ ಕಳಿಸಿದವರು ಪವಿತ್ರ ಗಂಗೂಲಿ. ಇದರಿಂದಲೇ ನಜರುಲ್ ಗಂಗೂಲಿಯವರ ಚಿರಕಾಲದ ಮೈತ್ರಿ ಬೆಳೆಯಿತು.

ಸನ್ 1920 ಆರಂಭದಲ್ಲಿ ಬಂಗಾಲಿ ರೆಜಿಮೆಂಟು ವಿಸರ್ಜಿತವಾಯಿತು. ಇದಕ್ಕೆ ಮೊದಲೇ ಜನವರಿ ತಿಂಗಳಲ್ಲಿ ಒಂದು ವಾರದ ರಜೆಪಡೆದು ನಜರುಲ್ ಕಲಕತ್ತೆಗೆ ಮತ್ತು ಚುರುಲಿಯಕ್ಕೆ ಬಂದು ಹೋಗಿದ್ದನು. ಮುಜಫರ ಅಹಮದನೊಡನೆ ಮೊದಲ ಸಲ ಭೆಟ್ಟಿಯಾದದ್ದು ಇದೇ ಸಂದರ್ಭದಲ್ಲಿ. ಸೈನಿಕ ಜೀವನದಿಂದ ನಿವೃತ್ತಿಯಾಗುತ್ತಲೇ ಸಾಹಿತ್ಯವನ್ನೇ ವ್ಯವಸಾಯವಾಗಿ ಕೈಕೊಳ್ಳಬೇಕೆಂದು ಅಹಮದ ನಜರುಲ್‌ಗೆ ಒತ್ತಿ ಹೇಳಿದನು. ಮಾರ್ಚ 1920 ರಲ್ಲಿ ರೆಜಿಮೆಂಟು ವಿಸರ್ಜಿತವಾಯಿತು. ನಜರುಲ್ ತನ್ನ ಮುಂದಿನ ಜೀವನಕ್ಕೆ ಬಂಗಾಲಕ್ಕೆ ಬಂದನು. ಅವನು ಮೊದಲು ಮಾಡಿದ ಕೆಲಸ ತನ್ನ ಗ್ರಾಮಕ್ಕೆ ಹೋಗಿ ತನ್ನ ತಾಯಿಯನ್ನು ಕಂಡದ್ದು. ಅಲ್ಲಿಂದ ನೇರವಾಗಿ ಅವನು ಕಲಕತ್ತೆಗೆ ಬಂದಾಗ ಅವನ ಮಿತ್ರ ಶೈಲಜಾನಂದನ ಸ್ವಾಗತವು ಅವನಿಗಾಗಿ ಕಾದಿತ್ತು. ಆದರೆ ಅವನು ವಾಸಕ್ಕೆ ಹೋದದ್ದು ಮುಜಫರ್ ಅಹಮದನೊಡನೆ ಕಾಲೇಜ ಸ್ಟ್ರೀಟನಲ್ಲಿ ನಂ 32 ಮನೆಯ ಮಹಡಿಯಲ್ಲಿ. 'ಮೋಸ್ಲೆಮ್ ಭಾರತ' ಪತ್ರಿಕೆಯ ಮತ್ತು ಮುಸಲ್ಮಾನ ಸಾಹಿತ್ಯ ಸಮಿತಿಯ ಕಾರ್ಯಾಲಯಗಳು ಇದೇ ಬೀದಿಯಲ್ಲಿದ್ದವು. ಮುಜಫರ್ ಅಹಮದ, ಅಫಜಲ-ಉಲ್-ಇಸಲಾಮ, ಕಾಜೀ ಅಬ್ದುಲ್ ವದೂದ ಮೊದಲಾದ ಕಾರ್ಯಕರ್ತರು ಅಲ್ಲಿಯೇ ಅಕ್ಕಪಕ್ಕ

ದಲ್ಲಿ ವಾಸಿಸುತ್ತಿದ್ದರು. ನಂ. 32 ಮನೆಯು ಅವರ ಚಟುವಟಿಕೆಗಳ ಕೇಂದ್ರ ವಾಗಿತ್ತು. ನಜರುಲ್ ಅವರೊಡನೆ ಸೇರಿಕೊಂಡನು. ನಿವೃತ್ತ ಸೈನಿಕನೆಂಬ ಕಾರಣ ದಿಂದ ಅವನಿಗೆ ಇನ್ನೊಂದು ಉದ್ಯೋಗ ದೊರೆಯುವದು ಸುಲಭವಾಗಿತ್ತು. ರೆವಿನ್ಯೂ ಇಲಾಖೆಯಲ್ಲಿ ಸಬ್‌ರಜಿಸ್ಟ್ರಾರ ಕೆಲಸಕ್ಕಾಗಿ ಅವನನ್ನು ಸಂದರ್ಶನಕ್ಕೂ ಕರೆದಿದ್ದರು. ಆದರೆ 1917 ರಲ್ಲಿ ಅವನ ಉಜ್ವಲ ಸ್ವಾತಂತ್ರ್ಯ ಪ್ರೀತಿ ಅವನನ್ನು ಸೈನ್ಯದಲ್ಲಿ ಸೇರುವ ದಕ್ಕೆ ಪ್ರೇರಿಸಿದಂತೆ, ಯುದ್ಧಾನಂತರವೂ ಅದು ಅವನನ್ನು ನಿಶ್ಚಿಂತವಾದ ಸಂತೃಪ್ತ ಜೀವನದಲ್ಲಿ ಇರಗೊಡಲಿಲ್ಲ.

ಅವನು ಕರಾಚಿಯ ಬರಾಕುಗಳಲ್ಲಿದ್ದ ಕಾಲದಲ್ಲಿಯೇ ಮಧ್ಯ ಏಸಿಯದಲ್ಲಿಯ ಪಾಳೆಯಗಾರಿಕೆಗಳು ಮುರಿದು ಬೀಳುತ್ತಿದ್ದ ಮತ್ತು ಕೆಂಪು ಸೇನೆಯು ಆ ಪ್ರದೇಶ ವನ್ನು ವ್ಯಾಪಿಸುತ್ತಿದ್ದ ಸುಳಿವು ಅವನ ಕಿವಿಗೆ ಬಿದ್ದಿತ್ತು (1918-20). ಸಾಮ್ರಾಜ್ಯ ವಾದಿಗಳು ಹೆಜಾಜನ್ನೂ ನೆರೆಹೊರೆಯ ಮುಸ್ಲಿಮದೇಶಗಳನ್ನೂ ಆಕ್ರಮಿಸಿದ್ದಕ್ಕೆ ಇಂಡಿಯದ ಮುಸ್ಲಿಮರು ಪ್ರತಿಭಟಿಸಿದ್ದು ಅವನಿಗೆ ಒಪ್ಪಿಗೆಯಾಗಿತ್ತು. ಇದೇ ಕಾಲಕ್ಕೆ ಎಲ್ಲರನ್ನೂ ರೇಗಿಸಿದ ರೌಲೆಟ್‌ಕಾಯಿದೆ (1919) ಸಮಗ್ರ ಇಂಡಿಯಾ ದೇಶವು ಬ್ರಿಟಿಶರ ಆಳಿಕೆಯನ್ನು ವಿರೋಧಿಸುವಂತೆ ಮಾಡಿತು. ಗಾಂಧೀಜಿ ಸತ್ಯಾಗ್ರಹ ವನ್ನು ಪ್ರಸ್ತಾಪಿಸಿದರು. ಪಂಜಾಬಿನಲ್ಲಿ ನಡೆದ ಅನೇಕ ಕ್ರೂರ ಕರ್ಮಗಳಿಗೆ ಜಲಿಯಾನವಾಲಾಬಾಗನಲ್ಲಿ ನಡೆದ ಕಗ್ಗೊಲೆಯು ಕಳಸವನ್ನಿಟ್ಟಿತು (13-4-1919). ಈ ಎಲ್ಲ ಪ್ರಚೋದನೆಗಳಿಂದಾಗಿ ರಾಷ್ಟ್ರೀಯ ಕ್ರಾಂತಿಯು ಪ್ರಕಟವಾಗಿ ಕಾಣಿಸಿ ಕೊಂಡಿತು. ಇಂಡಿಯದ ಹಿಂದೂ ಮುಸ್ಲಿಮರೆಲ್ಲರ ಎದೆಯಲ್ಲಿ ಹೊತ್ತಿದ ಬೆಂಕಿ ನಜರುಲ್ ಎದೆಯಲ್ಲಿಯೂ ಉರಿಯಿತು. ಬಂಗಾಲ ಮತ್ತು ಕಲಕತ್ತೆಯಲ್ಲಿ ಅದರ ಬೇಗೆ ಇನ್ನೆಲ್ಲಿಗಿಂತಲೂ ಹೆಚ್ಚಾಗಿತ್ತು. ನಜರುಲ್ ತನ್ನ ನಿರ್ಧಾರ ಮಾಡಿಬಿಟ್ಟಿದ್ದನು; ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ತಾನೂ ಕೈಯೆತ್ತಿ ಹೊಣೆಯುಲೇಬೇಕು; ರಾಷ್ಟ್ರೀಯ ಸಾಹಿತ್ಯಕ್ಕೆ ತನ್ನ ಕಾಣಿಕೆ ಸಲ್ಲಲೇಬೇಕು; ಪರಿಣಾಮವೇನೇ ಆದರೂ ಅದು ಲೆಕ್ಕಕ್ಕಿರಲಿಲ್ಲ. ಅವನ ಮಿತ್ರರೂ ಅವನ ನಿರ್ಧಾರವನ್ನು ಬೆಂಬಲಿಸಿದರು. ಅವನ ಸಾಹಿತ್ಯ ಶಕ್ತಿಯಲ್ಲಿ ಅವರಿಗೆ ಅಪಾರವಾದ ವಿಶ್ವಾಸವಿದ್ದಿತು. ಹೀಗಾಗಿ ನಜರುಲ್ ಸರಕಾರಿ ನವಕರಿಯ ಆಮಿಷವನ್ನು ಕಡೆಗಣಿಸಿ ಎಂದಿನಂತೆ ತನ್ನ ಪ್ರಜ್ವಲಿಸುವ ಉತ್ಸಾಹದಿಂದ ಅಸ್ಪಷ್ಟವಾಗಿದ್ದ ಭವಿಷ್ಯದಲ್ಲಿ ಮುನ್ನುಗ್ಗಿದನು. ಆಗ ಅವನ ವಯಸ್ಸು ಕೇವಲ 21.

## 2. ಯೋಧಕವಿ—ಮೊದಲ ನೆರೆ

ಕಾಜೀ ನಜರುಲ್ ಇಸ್ಲಾಮು 1920ರಲ್ಲಿ ತನ್ನ ಪ್ರಬುದ್ಧ ಜೀವನದ ಹೊಸಲಲ್ಲಿ ಕಾಲಿರಿಸಿದನು. ನುಗ್ಗಿದನು ಎಂದರೂ ಸಲ್ಲೀತು. ಏಕೆಂದರೆ ತಾನು ಸ್ವಾತಂತ್ರ್ಯ ಯೋಧರ ಪಕ್ಷದವನೆಂಬದು ಅವನಿಗೆ ಖಚಿತವಾಗಿತ್ತು. ಸಾಹಿತ್ಯ ಪ್ರಪಂಚದಲ್ಲಿ ಕೀರ್ತಿಯನ್ನೂ ಗಣ್ಯವಾದ ಸ್ಥಾನವನ್ನೂ ಪಡೆಯುವದನ್ನೂ ನಿರ್ಧರಿಸಿದ್ದನು. 'ಮೋಸ್ಲೆಮ್ ಭಾರತ'ವು ಅವನ ಮುಖ್ಯ ವೇದಿಕೆಯಾಗಿತ್ತು. ಅದರ ಸಂಚಾಲಕರಾದ ಅವನ ಮಿತ್ರರು ಉತ್ಸಾಹದಲ್ಲಿದ್ದರು. ಕವಿಯ ಉತ್ಸಾಹ ಅವರಿಗಿಂತ ಒಂದು ಹೆಜ್ಜೆ ಮುಂದಾಗಿತ್ತು. ಪ್ರಸಿದ್ಧ ಮುಸ್ಲಿಮ ಕವಿಯಾಗಿದ್ದ ಮೊಜಮ್ಮಲ್‌ಹಕ್ (ಶಾಂತಿ ಪುರ) ಎಂಬವರು ನಾಮಮಾತ್ರಕ್ಕೆ ಸಂಪಾದಕರಾಗಿದ್ದರು. ನಿಜವಾದ ಸಂಪಾದಕನು ಅವರ ಮಗ ಜನಾಬ ಅಫಜಲುಲ್ ಹಕ್, ಮತ್ತು ಪತ್ರಿಕೆಯ ಕಾರ್ಯಾಲಯವು ವಾಸ್ತವವಾಗಿ ಕಾಲೇಜಸ್ಟ್ರೀಟಲ್ಲಿಯ ನಂ. 32 ಮನೆಯೇ ಆಗಿತ್ತು. ಅದರ ಮೊದಲ ಸಂಚಿಕೆ ವೈಶಾಖ 1927 ಏಪ್ರಿಲ್ (?) 1920, ನಜರುಲ್‌ನ ಮೊದಲನೆಯ ಕಾದಂಬರಿ 'ಬಂಧನಹರ'ದಿಂದ ಆರಂಭವಾಯಿತು. ಪತ್ರರೂಪದಲ್ಲಿ ಬರೆದ ಈ ಕಾದಂಬರಿ ತಿಂಗಳುಗಟ್ಟಲೆ ಧಾರಾವಾಹಿಯಾಗಿ ಪ್ರಕಟವಾಯಿತು. ಅವನ ದಿಟ್ಟವಾದ ಹೊಸ ಕವಿತೆಗಳು ಈ ಪತ್ರಿಕೆಯ ಪುಟಗಳನ್ನು ತುಂಬಿ ಹೊರಸೂಸಿ ಸೌಗತ, ಉಪಾಸನಾ, ಬಿಜಲಿ, ಮೊದಲಾದ ಬೇರೆ ಸಾಹಿತ್ಯ ಪತ್ರಿಕೆಗಳಲ್ಲಿಯೂ ಕಾಣಿಸಿದವು. ಆ ವರ್ಷದ (ಬಂ. ಸ. 1327) ಮೋಸ್ಲೆಮ್ ಭಾರತದಲ್ಲಿ ಪ್ರಕಟವಾದ ಕೃತಿಗಳು ಇವು—

1 ಬಂಧನಹರ
2 ಕುರ್ಬಾನಿ (ಬಲಿದಾನ).
3 ಬಾದಲ ಬರಿಶನ (ಮಳೆ ಮತ್ತು ಹೊಯ್ಮಳೆ), ಸಾಂಕೇತಿಕ ಕತೆ.
4 ಬಾದಲ ಪ್ರಾತೇರ ಸೊಹರಾಬ (ಮಳೆಗಾಲದ ಬೆಳಗಿನ ಪ್ರಾರ್ಥನೆ), ಕವಿತೆ.
5 ಬೋಧನ (ಸಮಾರಂಭ), ಕವಿತೆ.
6 ಮೊಹರಮ್ (ಕವಿತೆ).
7 ಶಾತ-ಇಲ್-ಅರಬ್ (ಮೆಸೊಪೊಟೇಮಿಯದಲ್ಲಿಯ ಯುಫ್ರತೀಸ ನದಿಯ ಅರಬ್ಬಿ ಹೆಸರು), ಕವಿತೆ.
8 ಹಾಡುಗಳು (3).
9 ಗಜಲ್ (ಹಾಫಿಜ ಕೃತಿಯ ಭಾಷಾಂತರ).
10 ಫಾತವಾ-ಇ-ದೊಆಜ್‌ದೊಮ (ಪ್ರವಾದಿಯ ಜನ್ಮದಿನ), ಕವಿತೆ.

11 ಬಿರಹ ಬಿಧುರ: ಕವಿತೆ.

12 ಮರಮಿ (ಅನುಭಾವಿಯ ಹೃದಯ): ಹಾಡು.

13 ಸ್ನೇಹಭೀತು (ಪ್ರೀತಿಗೆ ಹೆದರಿದ): ಕವಿತೆ.

ಸಾಹಿತ್ಯ ಪ್ರಪಂಚದಲ್ಲಿ ಇವು ಉನ್ನತ ಸ್ಥಾನದಲ್ಲಿವೆ. ಪ್ರಕಟವಾದಾಗಂತೂ ಓದುಗರಿಗೆ ವಿಸ್ಮಯವನ್ನುಂಟುಮಾಡಿದವು. ಈ ತರುಣ ಲೇಖಕನಿಗಾಗಿ ಎಲ್ಲೆಲ್ಲಿಯೂ ಆದರದ ಸ್ವಾಗತ ಕಾದಿತ್ತು. ನಜರುಲ್ ಪ್ರತಿಭೆ ಕಾದಂಬರಿಕಾರನದಲ್ಲವೆಂಬುದು ನಿಜವಾದರೂ ಅಂದು ಬಂಧನಹರ ಕಾದಂಬರಿಗೂ ಉತ್ಸಾಹದ ಸ್ವಾಗತ ದೊರೆಯಿತು. ಕತೆಯ ವಸ್ತುವು ನಾಯಕನ ಕರಾಚಿಯಲ್ಲಿಯ ಜೀವನವೇ ಆಗಿದ್ದದ್ದು ಮೇಲೆಯೇ ಕಾಣುವಂತಿತ್ತು. ಕವಿಯಂತೆಯೇ ಅವನೂ ಹವಿಲ್ದಾರ ಕ್ವಾರ್ಟರ ಮಾಸ್ಟರ ಹುದ್ದೆಯಲ್ಲಿದ್ದವನೇ. ಕಾವ್ಯಕ್ಕೆ ಉಚಿತವಾದ ರಮ್ಯತೆ ಮತ್ತು ಭಾವಾವೇಶಗಳು ಉದ್ದಕ್ಕೂ ಎದ್ದು ಕಾಣುತ್ತವೆ. ಈ ಧಾರಾವಾಹಿ ಇನ್ನೂ ಪ್ರಕಟವಾಗುತ್ತಿದ್ದಂತೆಯೇ ಪ್ರಮುಖ ಮಾಸ ಪತ್ರಿಕೆಯಾದ ನಾರಾಯಣದಲ್ಲಿ (ಬಂ. ಸಂ. 1327 ಭಾದ್ರ: ಆಗಸ್ಟ 1920) ಅನುಕೂಲವಾದ ವಿಮರ್ಶೆಯನ್ನು ಪಡೆಯಿತು. [ಈ ಪತ್ರಿಕೆಯ ಸಂಸ್ಥಾಪಕ ಚಿತ್ತರಂಜನದಾಸ; ಅಂದು ಸಂಪಾದಕರಾಗಿದ್ದವರು ಬರೀಂದ್ರಕುಮಾರ ಘೋಷ.]

ಮೊಸ್ಲೆಮ ಭಾರತ ಮತ್ತು ಸೌಗತ ಪತ್ರಿಕೆಗಳಲ್ಲಿ ಪ್ರಕಟವಾದ ನಜರುಲ್ ಕವಿತೆಗಳು ಆಗಲೇ ಸಾಕಷ್ಟು ಕೀರ್ತಿಯನ್ನು ಗಳಿಸಿದ್ದವು. ಶಾತ್-ಇಲ್-ಅರಬ್ ಕವಿತೆಯು ಇರಾಕಿನಲ್ಲಿದ್ದ ಬಂಗಾಲಿ ಸೈನಿಕನೊಬ್ಬನು ಆ ದೇಶವನ್ನು ಸಂಬೋಧಿಸಿ ಬರೆದಂತಿದೆ. ಮತಶ್ರದ್ಧೆಗಾಗಿ ಪ್ರಾಣ ನೀಗಿದವರ ಪವಿತ್ರ ಭೂಮಿಯಾದ ಇರಾಕ್, ಕವಿಯ ಮಾತೃಭೂಮಿಯಂತೆಯೇ ಬಂಧನದಲ್ಲಿರುವದಕ್ಕೆ ಕವಿ ಶೋಕಿಸುತ್ತಾನೆ. ಇದರಲ್ಲಿ ನಜರುಲ್‌ನ ವಿಶಿಷ್ಟ ಪ್ರತಿಭೆ ವ್ಯಕ್ತವಾಗಿದೆ. ಈ ಮಾದರಿಯ ಕವಿತೆಗಳಲ್ಲಿ ಅದು ಮೊದಲನೆಯದೆನ್ನುವಂತಿರಲಿಲ್ಲ. ಆದರೂ ಅದರಲ್ಲಿಯ ದೇಶಭಕ್ತಿಯ ಪ್ರವಾಹ ಮತ್ತು ತಡೆಯಿಲ್ಲದೆ ಹರಿಯುವ ಬಂಗಾಲಿ ಶಬ್ದಗಳೊಡನೆ ಸಹಜವಾಗಿ ಬೆರೆಯುವ ಪಾರ್ಸಿ ಅರಬೀ ಶಬ್ದಗಳ ಹಾಳತವಾದ ಮಿಶ್ರಣದಿಂದ ಹೊರಡುವ ಇಂಪಾದ ನಾದಗಳು ಗಮನ ಸೆಳೆಯುತ್ತವೆ. ಅದರ ಚೆಲುವಿಗೆ ಮಾರು ಹೋಗದವರೇ ಇರಲಿಲ್ಲ. ಮೊಹರಂ, ಬಾದಲಪ್ರಾತೇರ ಸೊಹರಾಬ, ಮೊದಲಾದ ಉಳಿದ ಕವಿತೆಗಳೂ ಅದರಂತೆಯೇ ಓದುಗರನ್ನು ಆಕರ್ಷಿಸಿದವು. ಮೊಸ್ಲೆಮ ಭಾರತದ ಪುಟಗಳಲ್ಲಿ ಇಸ್ಲಾಮಿಗೆ ಹತ್ತಿರವಾದ ಕೃತಿಗಳಿಗೆ ಪ್ರಾಮುಖ್ಯ ದೊರೆಯುವದು ಸ್ಪಷ್ಟವಾಗಿತ್ತು. ಈ ಪತ್ರಿಕೆಯಲ್ಲಿ ಪ್ರಕಟವಾದ ಮೊಹರಂ, ಕುರಬಾನೀ, ಫತವಾ-ಇ-ದೊಅಜದೊಮ, ಮೊದಲಾದ ನಜರುಲ್ ಕೃತಿಗಳು ಇಸಲಾಮ ಧರ್ಮ ಸಂಸ್ಕೃತಿಗಳಿಗೆ ಸೇರಿದ ಸಂಸ್ಕಾರ ಸಂದರ್ಭಗಳನ್ನು ಕುರಿತಾಗಿರುವದು ಸಹಜವಾಗಿತ್ತು. ಇವುಗಳಲ್ಲಿ ಉನ್ನತ ಮಟ್ಟದ ಕಾವ್ಯಗುಣವಿದ್ದದ್ದು ಮಾತ್ರವಲ್ಲದೆ, ಬೇರೆ ಕಾರಣಗಳಿಗಾಗಿಯೂ ಈ ಕೃತಿಗಳಿಗೆ ಮಹತ್ವವಿದ್ದಿತು.

ಬಂಗಾಲಿ ಸಾಹಿತ್ಯದಲ್ಲಿ ಈ ಮಟ್ಟಿಗೆ ಪಾರ್ಸಿ ಅರಬ್ಬಿ ಮೂಲಗಳಿಂದ ಪಡೆದ ಸಾಮಗ್ರಿ ಸಂಸ್ಕೃತ ಮೂಲದಿಂದ ಪಡೆದುದರಷ್ಟು ವಿಪುಲವಾಗಿರಲಿಲ್ಲ. ಇದಕ್ಕೆ

ಕಾರಣವೆಂದರೆ ಬಂಗಾಲದಲ್ಲಿ ಮುಸಲ್ಮಾನ ಲೇಖಕರೇ ಹೆಚ್ಚಾಗಿರಲಿಲ್ಲ, ಇದ್ದ ಕೆಲವರನ್ನು ಪ್ರತಿಷ್ಠಿತ ವರ್ಗದವರು ನಿರ್ಲಕ್ಷಿಸಿದ್ದರು. ಪಾಳೆಯಗಾರಿಕೆಯ ಯುಗದಲ್ಲಿ ಲ್ಯಾಟಿನ್ ಯುರೋಪಿನಲ್ಲಿ ಪ್ರತಿಷ್ಠಿತರ ಭಾಷೆಯಾಗಿದ್ದಂತೆ ಭಾರತದಲ್ಲಿ ಪಾರ್ಸೀ ಭಾಷೆಯು ಪ್ರಾಶಸ್ತ್ಯವನ್ನು ಪಡೆದಿತ್ತು. ನಜರುಲ ಸಾಹಿತ್ಯರಚನೆಗೆ ತೊಡಗಲು ಈ ಪಾರ್ಸಿ ಅರಬ್ಬೀ ಸಂಸ್ಕೃತಿಯಿಂದ ಪಡೆದ ಸಾಮಗ್ರಿಗಳಿಗೆ ಸಾಹಿತ್ಯದಲ್ಲಿ ಪ್ರತಿಷ್ಠೆ ದೊರೆಯಿತು. ಈ ಸಾಮಗ್ರಿ ಬಂಗಾಲದ ಹಿಂದೂ ಸಾಹಿತಿಗಳನ್ನೂ ಆಕರ್ಷಿಸಿತು.

ಅಂದಿನ ಪರಿಸ್ಥಿತಿಯೂ ಇದಕ್ಕೆ ಅನುಕೂಲವಾಗಿತ್ತು. ಖಿಲಾಫತ ಚಳುವಳಿಯಿಂದಾಗಿ ಹಿಂದುಗಳೂ ಮುಸ್ಲಿಮರೂ ಸಾಮ್ರಾಜ್ಯಶಾಹಿಯನ್ನು ವಿರೋಧಿಸುವದರಲ್ಲಿ ಒಂದುಗೂಡಿದರು. ಎರಡೂ ಪಂಗಡಗಳಲ್ಲಿ ಪರಸ್ಪರ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಿಚಯವನ್ನು ಬೆಳೆಸುವದಕ್ಕೆ ಸಾಹಿತಿಗಳು ಆತುರರಾಗಿದ್ದರು. ಎರಡೂ ಪಂಗಡಗಳ ಸಾಹಿತಿಗಳ ಎಲ್ಲ ಪ್ರಯತ್ನಗಳೂ ರಾಷ್ಟ್ರೀಯ ಐಕ್ಯಕ್ಕೂ ಸ್ವಾತಂತ್ರ್ಯ ಸಂಗ್ರಾಮಕ್ಕೂ ಪೋಷಕವೆಂದು ಆದರಿಸಲ್ಪಟ್ಟವು. ಸಪ್ಟಂಬರ 1920 ರಲ್ಲಿ ಕಲಕತ್ತೆಯಲ್ಲಿ ಸೇರಿದ ಕಾಂಗ್ರೆಸಿನ ವಿಶೇಷ ಅಧಿವೇಶನದಲ್ಲಿ ಅಸಹಕಾರ ಚಳುವಳಿಯನ್ನು ಸಮರ್ಥಿಸುವ ಗೊತ್ತುವಳಿ ಪಾಸಾಯಿತು, ನಿಜವಾಗಿಯೂ ಅಂದಿನ ಸಾರ್ವಜನಿಕ ಜೀವನದ ಸ್ಫೂರ್ತಿರೀತಿಗಳು ನಜರುಲ್ ಮನಸಿನ ಒಲವಿನಂತೆಯೇ ಹರಿಯುತ್ತಿದ್ದವು. ವೈಯಕ್ತಿಕವಾಗಿಯೂ ಅವನಿಗೆ ಅಂದಮಾನಿನಿಂದ ಹಿಂದಿರುಗಿದ ಬರೀಂದ್ರಕುಮಾರ ಘೋಷ, ಅಬಿನಾಶ ಭಟ್ಟಾಚಾರ್ಯ, ಸಂಗೀತಕಾರ ನಲಿನೀಕಾಂತ ಸರಕಾರ ಮತ್ತು ಇವರಂತಹ ಇನ್ನೂ ಅನೇಕ ತೀವ್ರಗಾಮಿಗಳ ಮತ್ತು ಕ್ರಾಂತಿಕಾರಿಗಳ ಸಮೀಪದ ಸಂಪರ್ಕ ಒದಗಿತು. ಅವನ ತೆರೆದ ಮನಸು, ತೀವ್ರಗಾಮಿ ಅಭಿಪ್ರಾಯಗಳು ಮತ್ತು ಸಾಹಿತ್ಯಾಸಕ್ತಿಗಳು ಬಿಜಲೀ ಪತ್ರಿಕೆಯ ಸಾಹಿತ್ಯಿಕ ಮತ್ತು ರಾಜಕೀಯ ಪರಿವಾರದಲ್ಲಿ ಅವನಿಗೆ ಹಾರ್ದಿಕವಾದ ಸ್ವಾಗತ ದೊರೆಯುವಂತೆ ಮಾಡಿದವು. ಅವರೆಲ್ಲರೂ ಮುನ್ನೋಡುತಿದ್ದ ರಾಷ್ಟ್ರೀಯ ಐಕ್ಯದ ದಿನಕ್ಕೆ ಈ ಮುಸ್ಲಿಮ ಬಂಗಾಲದ ಕುವರನೊಬ್ಬ ಹರಿಕಾರನಾಗಿ ಬಂದನೆಂಬಂತೆ ಅವರಿಗೆ ತೋರಿತು.

ಸ್ವಲ್ಪಕಾಲದಲ್ಲಿಯೇ ಬಂಗಾಲದಲ್ಲಿ ಸಾಹಿತ್ಯಾಭಿರುಚಿಯುಳ್ಳ ಮತ್ತು ವಿಶೇಷವಾಗಿ ತೀವ್ರಗಾಮಿಗಳತ್ತ ಒಲಿದ ಪತ್ರಿಕಾ ಸಂಪಾದಕರಿಗೂ ಓದುಗರಿಗೂ ಕಾಜಿ ನಜರುಲ ಇಸ್ಲಾಮ ಪ್ರಿಯವಾದ ಹೆಸರಾಯಿತು. ಅವನ ಕೃತಿಗಳನ್ನು ಮೊಸ್ಲೆಮ ಭಾರತ ಮತ್ತು ಸೌಗತದಂತಹ ಇಸ್ಲಾಮಿ ಸಾಹಿತ್ಯ ಪತ್ರಿಕೆಗಳಲ್ಲದೆ ಮೊದಲಿನಿಂದಲೇ ಸಾಹಿತ್ಯಕ್ಕೆ ಮೀಸಲಾಗಿದ್ದ ಉಪಾಸನಾ ಮತ್ತು ಭಾರತೀ ಪತ್ರಿಕೆಗಳೂ ಪ್ರಸಿದ್ಧಿಸಿದವು. ಬರೀಂದ್ರಕುಮಾರನು ಹೊಸದಾಗಿ ಆರಂಭಿಸಿದ ಬಿಜಲೀ ವಾರಪತ್ರಿಕೆಯು ದಿಟ್ಟವಾದ ಹೋರಾಟದ ಮನೋವೃತ್ತಿಯ ವಿಚಾರಗಳನ್ನು ಹರಡುವದಕ್ಕೆ ತೊಡಗಿತು. ಸೋವಿಯತ ಸಂಯುಕ್ತ ರಾಷ್ಟ್ರದಲ್ಲಿ ನಡೆಯುತ್ತಿದ್ದ ಸಮಾಜವಾದಿ ಪ್ರಯೋಗಗಳನ್ನು ಕುರಿತು ಸಹಾನುಭೂತಿಯುತ ವಿಮರ್ಶೆಗಳು

ಇದರಲ್ಲಿ ಬರುತ್ತಿದ್ದವು. ಈ ಪತ್ರಿಕೆಯಲ್ಲಿ ನಜರುಲ್‌ಗೆ ಆದರದ ಸ್ವಾಗತ ದೊರೆಯಿತು. ಅವನು ಗದ್ಯಪದ್ಯಗಳನ್ನು ಅವಿರತವಾಗಿ ಬರೆಯುತ್ತಲೇ ಇದ್ದನು. ಅವನ ವಿಶೇಷವಾದ ಪ್ರತಿಭೆ ಕಾವ್ಯದಲ್ಲಿ ಎಂಬುದು ಆಗಲೇ ಕಂಡುಬಂದಿತ್ತು. ಹಾಡುಗಳನ್ನು ರಚಿಸುವದರಲ್ಲಿಯೂ ಹಾಡಿ ತೋರಿಸುವದರಲ್ಲಿಯೂ ಅವನಿಗೆ ಅಪಾರವಾದ ಆಸಕ್ತಿ ಇದ್ದಿತು. ಅವನು ರಚಿಸಿದ ಹಾಡುಗಳಿಂದಾಗಿ ಮಾತ್ರವಲ್ಲದೆ ತನ್ನ ಕೃತಿಗಳನ್ನೂ ರವೀಂದ್ರರ ಕೃತಿಗಳನ್ನೂ ಹಾಡುವದರಲ್ಲಿ ಅವನು ತೋರುತ್ತಿದ್ದ ವಿಶಿಷ್ಟವಾದ ಶಕ್ತಿಯಿಂದ ಅವನು ಕಲಕತ್ತೆಯ ಎಲ್ಲ ಸಮಾಜಗಳಲ್ಲಿಯೂ ಹಿಂದೂ-ಮುಸ್ಲಿಮ ಭೇದವಿಲ್ಲದೆ ಜನಪ್ರಿಯತೆಯನ್ನು ಗಳಿಸಿದನು. ಕೇವಲ ಅವನ ಹಾಡುಗಾರಿಕೆಗೇ ಒಲಿದ ಜನಸಮೂಹ ಇನ್ನೂ ದೊಡ್ಡದಾಗಿತ್ತು. ಅವರಲ್ಲಿ ಸಾಮಾನ್ಯ ಜನರೆನ್ನಿಸಿದವರೇ ಬಹಳವಾಗಿದ್ದರಲ್ಲದೆ ಅವರೊಡನೆ ಅವನ ನಂಟೂ ಬಲವಾಗಿದ್ದಿತು. "ಭಾರತೀ" ಗುಂಪಿನ ಲೇಖಕರು ಉಚ್ಚಶಿಕ್ಷಣ ಪಡೆದ ಟಾಗೋರಭಕ್ತರಾಗಿದ್ದರು. ಆದರೆ ಅವರ ಸಾಹಿತ್ಯಿಕ ಮತ್ತು ರಾಜಕೀಯ ಚಿಂತನೆ ಹೆಚ್ಚು ತೀವ್ರಗಾಮಿಯಾಗಿತ್ತು. ಅವರೂ ನಜರುಲ್‌ನನ್ನು ನಿಸ್ಸಂಕೋಚದಿಂದ ತಮ್ಮಲ್ಲಿ ಒಬ್ಬನೆಂದು ಕರೆದುಕೊಂಡರು. ಅವರಿಗೆ ವಿಶೇಷವಾಗಿ ಒಪ್ಪಿಗೆಯಾದದ್ದು ಅವನ ಕವಿಪ್ರತಿಭೆ. ಅದೇ ಪರಿವಾರದಲ್ಲಿ ಅಂದು ಟಾಗೋರರಿಗೆ ಎರಡನೆಯವನೆನಿಸಿದ ಸತ್ಯೇಂದ್ರನಾಥ ದತ್ತ, ಮಣಿಲಾಲ ಗಂಗೂಲಿ, ಪ್ರೇಮಾಂಕುರ ಅತಾರ್ಥಿ, ಮೊಹಿತಲಾಲ ಮಜುಮದಾರ ಮೊದಲಾದ ಪ್ರತಿಭಾವಂತರಿದ್ದರು. ಅಂದಿನ ಕಾಲದಲ್ಲಿ ಮೊಹಿತಲಾಲ ತನ್ನ ಹೊಸ ರೀತಿ ಹೊಸ ಭಾವಗಳ ಅಭಿವ್ಯಕ್ತಿಗಾಗಿ ಹೆಸರುಪಡೆದನಾಗಿದ್ದನೆಂಬುದನ್ನೂ ಇಲ್ಲಿ ಗಮನಿಸಬೇಕು. ಮೋಹಿತಲಾಲನಿಗೆ ನಜರುಲ್ ಅಪರೂಪವಾದ ಹೊಸ ವಸ್ತುವಾಗಿ ತೋರಿದನು. ಅವನಿಗೆ ನಜರುಲ್ ಪರಿಚಯವಾಗುವದಕ್ಕಿಂತ ಮೊದಲೇ ಮೊಸ್ಲೆಮ ಭಾರತದಲ್ಲಿ ಪ್ರಕಟವಾದ ಅವನ ಎರಡು ಕವಿತೆಗಳನ್ನು ನೋಡಿ ಇಲ್ಲೊಬ್ಬ ಪ್ರತಿಭಾವಂತ ಕವಿಯನ್ನು ಕಂಡಿದ್ದೇನೆಂದು ಮನಸಾರೆ ಮೆಚ್ಚಿಗೆಯನ್ನು ಸೂಚಿಸಿ ಆ ಪತ್ರಿಕೆಯಲ್ಲಿ ಅವನು ಬರೆದನು. ರೀತಿ ಮತ್ತು ಪದಪ್ರಯೋಗದಲ್ಲಿ ನಜರುಲ್ ಸೂಸುತ್ತಿದ್ದ ಸಾಮರ್ಥ್ಯವನ್ನೂ, ಪದ್ಯಬಂಧ ಮತ್ತು ಪ್ರಾಸಗಳ ಮೇಲೆ ಅವನಿಗಿದ್ದ ಹಿಡಿತವನ್ನೂ, ಅವನು ಬಳಸುತ್ತಿದ್ದ ಪಾರ್ಸೀ ಶಬ್ದಗಳ ಶ್ರೀಮಂತಿಕೆಯನ್ನೂ ಗಮನಿಸಿ ಅವನಿಂದ ಬಂಗಾಲಿ ಕವಿತೆಗೆ ಹೊಸ ಸತ್ವವೂ ಬಲವೂ ದೊರೆಯುವವೆಂದು ಮೊಹಿತಲಾಲ ಖಚಿತವಾಗಿ ಹೇಳಿದನು. ಬಹುಶ್ರುತನಾದ ಕವಿಯೊಬ್ಬನ ಇಂತಹ ನಿಷ್ಕಪಟವಾದ, ಪ್ರೀತಿಯುತವಾದ, ಮೆಚ್ಚುಗೆಯ ಮಾತುಗಳಿಗೆ ನಜರುಲ್ ಮಾರುವೋದನು. ವಯಸ್ಸಿನಲ್ಲಿ ತನಗಿಂತ ಹದಿನಾಲ್ಕು ಹದಿನೈದು ವರ್ಷ ಹಿರಿಯನಾದ ಮೊಹಿತಲಾಲ ಅವನಿಗೆ ಬಹು ಹತ್ತಿರದವನಾದನು. ಆದರೆ 1922 ರಲ್ಲಿ ಹೊಸದಾರಿಯನ್ನೇ ತುಳಿದ 'ಬಿದ್ರೋಹಿ' ಎಂಬ ನಜರುಲ್ ಕವನವು ಅವರಿಬ್ಬರನ್ನೂ ಅಗಲಿಸಿತು. ಈ ಸಂಗತಿಯ ವಿವರಗಳನ್ನು ಮುಂದೆ ನೋಡುವ. ಈಗ ಸದ್ಯ ನೋಡಬೇಕಾದದ್ದು ಕಲಕತ್ತೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಹೊಸಬನಾಗಿ ಬಂದ ನಜರುಲ್ ಹೇಗೆ ಬೆಳೆದನೆಂಬುದು.

ಕಲಕತ್ತೆಗೆ ಬಂದಕೂಡಲೇ ನಜರುಲ್ ಮಾಡಲೇಬೇಕಾಗಿಬಂದ ಮೊದಲನೆಯ ಕೆಲಸವೆಂದರೆ ಉಪಜೀವನಕ್ಕೆ ಒಂದು ಮಾರ್ಗವನ್ನು ಕಂಡುಕೊಳ್ಳುವದು. ಅವನು ತನ್ನ ಗಳಿಕೆಯಲ್ಲಿ ಉಳಿಸಿದ್ದೇನೂ ಇರಲಿಲ್ಲ. ಮುಜಪ್ಫರ ಅಹಮ್ಮದನಂತಹ ಅವನ ಮಿತ್ರರ ಸ್ಥಿತಿಯೂ ಅಷ್ಟೇ. ಮೊಸ್ಲೆಮ ಭಾರತದಂತಹ ಅಂದಿನ ಬಂಗಾಲಿ ಸಾಹಿತ್ಯ ಮಾಸ ಪತ್ರಿಕೆಗಳು ಲೇಖಕರಿಗೆ ಸಂಭಾವನೆಯನ್ನು ಕೊಡುವಷ್ಟು ಗಳಿಸುತ್ತಿರಲಿಲ್ಲ. ದಿ. ರಮಾನಂದ ಚಟರ್ಜೀಯವರ ಪ್ರವಾಸಿ ಒಂದೇ ಇದಕ್ಕೆ ಅಪವಾದವಾಗಿತ್ತು. ಅಲ್ಲಿ ಲೇಖಕರಿಗೆ ಕವಿತೆಯೊಂದಕ್ಕೆ ಹತ್ತು ರೂಪಾಯಿ, ಕತೆಗಳು ಪ್ರಬಂಧಗಳು ಮೊದಲಾದ ಗದ್ಯ ಬರಹಗಳಿಗೆ ಪುಟವೊಂದಕ್ಕೆ ಮೂರು ರೂಪಾಯಿಯಂತೆ ಸಂಭಾವನೆ ದೊರೆಯುತ್ತಿತ್ತು ; ಒಟ್ಟಿನಲ್ಲಿ ಹದಿನೈದು ರೂಪಾಯಿಗಿಂತ ಹೆಚ್ಚು ಯಾವ ಒಂದೇ ಬರಹಕ್ಕೂ ಕೊಡುತ್ತಿರಲಿಲ್ಲ. ಅಂದು ಲೇಖನವನ್ನೇ ಜೀವನೋಪಾಯವಾಗಿ ಮಾಡಿಕೊಂಡಿದ್ದ ಪ್ರಥಮ ಮತ್ತು ಏಕಮಾತ್ರ ಲೇಖಕನೆಂದರೆ ಪ್ರಸಿದ್ಧ ಕಾದಂಬರಿಕಾರ ಶರತ್‌ಚಂದ್ರ ಚಟರ್ಜೀ. ಆಗ ಅವನು ಕೀರ್ತಿಯ ಮತ್ತು ಜನಪ್ರಿಯತೆಯ ಶಿಖರದಲ್ಲಿದ್ದರೂ ಅವನ ಆದಾಯವು ನಿಯಮಿತವಾಗಿ ಬರುತ್ತಿತ್ತಷ್ಟೇ ಹೊರತು ದೊಡ್ಡ ಆದಾಯವೆಂದು ಹೇಳಿಕೊಳ್ಳುವಂತಿರಲಿಲ್ಲ. ಅವನ ಕಾದಂಬರಿಗಳು ಭಾರತವರ್ಷವೆಂಬ ಮಾಸ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಬರುತ್ತಿದ್ದವು. ಇನ್ನುಳಿದ ಎಲ್ಲ ಲೇಖಕರೂ ಉಪಜೀವನಕ್ಕಾಗಿ ಶಿಕವಣಿ, ಕಾರಕೂನಿಕೆ, ವಕೀಲರ ಕೆಲಸಗಳು, ದಿನ ಪತ್ರಿಕೆಗಳು ಮುಂತಾದುವನ್ನು ಅವಲಂಬಿಸಿರಬೇಕಾಗಿತ್ತು. ಇವುಗಳಲ್ಲಿ ನಜರುಲ್‌ಗೆ ತೆರೆದಿದ್ದ ದಾರಿ ಪತ್ರಿಕೆಗಳದೊಂದೇ. ಇದರಲ್ಲಿ ಅದೃಷ್ಟವಶಾತ್ ಅವನಿಗೆ ಬೇಗನೆ ಅವಕಾಶ ದೊರೆಯಿತು. ಅವನ ಮಿತ್ರ ಮುಜಪ್ಫರ ಅಹಮ್ಮದನು ಒಂದು ಬಂಗಾಲಿ ದಿನ ಪತ್ರಿಕೆಯನ್ನು ಆರಂಭಿಸುವುದಕ್ಕೆ ಹಣಕಾಸಿನ ತರದೂದಿನಲ್ಲಿದ್ದನು. ಕಲಕತ್ತಾ ಹೈಕೋರ್ಟಿನಲ್ಲಿ ವಕೀಲನಾಗಿದ್ದ ಮತ್ತು ಬಂಗಾಲದ ಅಗ್ರಗಣ್ಯ ರಾಷ್ಟ್ರೀಯ ನಾಯಕರಲ್ಲೊಬ್ಬನೆಂದು ಹೆಚ್ಚು ಪ್ರಸಿದ್ಧಿಯನ್ನು ಪಡೆದಿದ್ದ ಎ. ಕೆ. ಫಜಲುಲ್ ಹಕ್ ಈ ಹಣ ಹೂಡುವುದಕ್ಕೆ ಒಪ್ಪಿದನು. ಸನ್ 1920 ರಲ್ಲಿ ದೇಶದ ಪರಿಸ್ಥಿತಿ ಕ್ಷುಬ್ಧವಾಗಿತ್ತು ಮತ್ತು ತನ್ನದೇ ಒಂದು ಪತ್ರಿಕೆಯನ್ನಿಟ್ಟುಕೊಂಡಿರುವುದು ಇಷ್ಟವೆಂದು ಅವನಿಗೆ ತೋರಿತು. ವಿಶೇಷವಾಗಿ ಮುಸ್ಲಿಮ ರಾಷ್ಟ್ರೀಯ ಮತವನ್ನು ರೂಪಿಸುವದಕ್ಕೆ ಅದು ಉಪಯುಕ್ತವೆನಿಸಿತ್ತು. ಅದು 'ನವಯುಗ' ಎಂಬ ಹೆಸರಿನಲ್ಲಿ ಪ್ರತಿದಿನ ಸಾಯಂಕಾಲ ಪ್ರಕಟವಾಗುವುದೆಂದು ಗೊತ್ತಾಯಿತು.

ನಜರುಲ್ ಇಸ್ಲಾಮ ಮತ್ತು ಮುಜಪ್ಫರ ಅಹಮ್ಮದ ಇಬ್ಬರ ಸಂಯುಕ್ತ ಸಂಪಾದಕತ್ವದಲ್ಲಿ ಜುಲೈ, 12, 1920 ದಿನ ನವಯುಗ ಆರಂಭವಾಯಿತು. ಇವರಿಬ್ಬರೂ ಅಂತಹ ಪ್ರಸಿದ್ಧ ವ್ಯಕ್ತಿಗಳೇನೂ ಆಗಿರಲಿಲ್ಲ. ಹಾಗೆಂದು ಅವರ ಕರ್ತೃತ್ವ ಶಕ್ತಿಯಲ್ಲಿ ಜ. ಹಕ್‌ರವರಿಗೆ ಅನುಮಾನವೇನಾದರೂ ಇದ್ದರೆ ಅದು ಕ್ಷಿಪ್ರದಲ್ಲಿಯೇ ನಿವಾರಣೆಯಾಯಿತು. ಅಂದಿನ ಸಾರ್ವಜನಿಕ ಜೀವನದಲ್ಲಿ ನವಯುಗ ತಡವಿಲ್ಲದೆಯೇ ಪ್ರತಿಷ್ಠಿತವಾಯಿತು. ಅದರಲ್ಲಿಯ ಶಕ್ತವಾದ ಬಂಗಾಲೀ ಬರವಣಿಗೆಯೂ ಸ್ಪಷ್ಟವಾದ ಪ್ರಬಲವಾದ ರಾಜಕೀಯ ಅಭಿಪ್ರಾಯಗಳೂ ಬೇಗನೆ ಜನಪ್ರಿಯವಾದವು. ಅದರ

ದೃಷ್ಟಿಕೋನ ನಿಸ್ಸಂಶಯವಾಗಿ ರಾಷ್ಟ್ರೀಯವಾಗಿತ್ತು. ಪ್ರಜಾಪ್ರಭುತ್ವದತ್ತ ಹೆಚ್ಚಾಗಿ ಒಲಿದಿತ್ತು. ಜನಸಾಮಾನ್ಯರ ಕಡೆಗೆ ಸ್ಪಷ್ಟವಾಗಿ ಪಕ್ಷಪಾತವುಳ್ಳದ್ದಾಗಿತ್ತು. ಸ್ವರಾಜ್ಯ ಸಂಗ್ರಾಮದಲ್ಲಿ ಈ ಪತ್ರಿಕೆಯ ಸಂಪಾದಕರು ಸುಶಿಕ್ಷಿತ ಉಚ್ಚವರ್ಗದವರಿಗಿಂತ ಹೆಚ್ಚಾಗಿ ಜನಸಾಮಾನ್ಯರಿಂದ ಬಲವಾದ ಹೋರಾಟವನ್ನು ನಿರೀಕ್ಷಿಸುತ್ತಿದ್ದರು. ಈ ಪತ್ರಿಕೆಗೆ ನಜರುಲ್‌ನಿಂದ ದೊರೆತದ್ದು ಅವನ ಲೇಖನಿಯ ಬಲವಂತೂ ಸರಿಯೆ ; ಸುದ್ದಿಗಳನ್ನು ಕಲೆಹಾಕುವದರಲ್ಲಿಯೂ ಎತ್ತಿ ತೋರಿಸುವದರಲ್ಲಿಯೂ ಸಹ ಅವನು ಅನಿರೀಕ್ಷಿತವಾದ ಕೌಶಲ್ಯವನ್ನು ತೋರಿಸಿದನು. ಅವನ ಸ್ವಭಾವಕ್ಕೆ ಸಹಜವಾಗಿದ್ದ ಉಲ್ಲಾಸ ವೃತ್ತಿಯು ಅವನು ಬರೆಯುತ್ತಿದ್ದ ಟಿಪ್ಪಣಿಗಳಲ್ಲಿ ನವುರಾದ ಹಾಸ್ಯದ ಛಾಯೆಯಾಗಿ ಕಾಣಿಸುತ್ತಿತ್ತು. ಮತ್ತು ಅದು ಸಂಪಾದಕೀಯ ಲೇಖನಗಳಲ್ಲಿರುತ್ತಿದ್ದ ಗಡುಸು ಭಾವಾವೇಶಗಳನ್ನು ಸರಿದೂಗಿಸುತ್ತಿತ್ತು.

ನವಯುಗದ ಕಾರ್ಯಾಲಯಕ್ಕೆ ಹತ್ತಿರದಲ್ಲಿರಬೇಕೆಂದು ಈ ಮಿತ್ರರಿಬ್ಬರೂ ಟರ್ನರ ಸ್ಟ್ರೀಟನಲ್ಲಿ ವಾಸಕ್ಕೆ ಬಂದರು. ಈ ಚಿಕ್ಕ ಕೋಣೆಗಳಲ್ಲಿ ಎಲ್ಲ ಮಾದರಿಯ ಸಾಹಿತಿಗಳೂ ರಾಜಕೀಯದಲ್ಲಿ ತೀವ್ರಗಾಮಿಗಳೂ ಯಾವಾಗಲೂ ನೆರೆದಿರುವದಕ್ಕೆ ನಜರುಲ್ ಕಾರಣನಾದನು. ನವಯುಗವು ಹಿಂದೂ ಮುಸ್ಲಿಮರಿಬ್ಬರಲ್ಲಿಯೂ ಪ್ರಿಯವಾಯಿತು. ಸಾಮ್ರಾಜ್ಯ ವಿರೋಧಿಯಾದ, ತೀವ್ರಗಾಮಿಯಾದ ಅದರ ನಿಲುವು ಅಂದು ಜನರಿಗೆ ಬೇಕಾದದ್ದೇ ಆಗಿತ್ತು. ಅದರ ಯಶಸ್ಸೇ ಅದಕ್ಕೆ ಅನೇಕ ಎಡರುಗಳು ಬರುವದಕ್ಕೆ ಕಾರಣವಾಯಿತು. ಅದರ ಬರವಣಿಗೆಯನ್ನು ಪೋಲೀಸರೂ ಸರಕಾರದವರೂ ಆಕ್ಷೇಪಿಸಿದರು. ಪ್ರಾರಂಭದಲ್ಲಿ ಕೊಟ್ಟಿದ್ದ ಒಂದುಸಾವಿರ ರೂಪಾಯಿಯ ಜಾಮೀನು ಜಪ್ತಿಯಾಯಿತು. ಎರಡು ಸಾವಿರ ರೂಪಾಯಿಯ ಹೊಸ ಜಾಮೀನು ಕೊಡಬೇಕಾಯಿತು. ಈ ಹಣವನ್ನು ಕೂಡಿಸುವದು ಸಂಪಾದಕರಿಗೆ ತಲೆನೋವಾಯಿತು. ಕೆಲವೇ ತಿಂಗಳುಗಳಲ್ಲಿ ಎರಡನೆಯ ಜಾಮೀನೂ ಮೊದಲನೆಯದರ ಹಾದಿಯನ್ನೇ ಹಿಡಿಯಿತು.

ಪತ್ರಿಕೆಯ ಒಡೆತನವನ್ನು ಹೊಂದಿದ್ದ ಫಜಲುಲ್ ಹಕ್ ತನ್ನ ಸ್ವಭಾವಕ್ಕೆ ಸರಿಯಾಗಿ ಇದಾವುದನ್ನೂ ಹಚ್ಚಿಕೊಳ್ಳದೇ ಇದ್ದನು. ಮತ್ತೆ ಜಾಮೀನಾಗಿ ಕೊಡಬೇಕಾದ ಹಣವನ್ನು ಕೂಡಿಸುವದರಲ್ಲೂ ಅವನಿಗೆ ಆಸ್ಥೆಯಿರಲಿಲ್ಲ. ಸಂಪಾದಕರ ವ್ಯವಹಾರಗಳಲ್ಲಾಗಲಿ ಬರವಣಿಗೆಯಲ್ಲಾಗಲಿ ಅವನು ಕೈಹಾಕುತ್ತಿರಲಿಲ್ಲವೆಂಬದನ್ನೂ ಒಪ್ಪಲೇಬೇಕು. ಅವನು ಧೀರನಾದ ರಾಷ್ಟ್ರೀಯವಾದಿಯಾಗಿದ್ದರೂ, ಜನಸಾಮಾನ್ಯರ ಬಗೆಗೆ ಅವನಿಗಿದ್ದ ಕಳಕಳಿಯು ನೈಜವಾಗಿದ್ದರೂ, ಅಂದಿನ ರಾಜಕೀಯ ಅವನ ಅಳವನ್ನು ಮೀರಿದ್ದಾಗಿತ್ತು. ಜನಗಳೆಲ್ಲರೂ ಮಹಾತ್ಮಾ ಗಾಂಧೀ ತೋರಿದ ಅಸಹಕಾರ ಮಾರ್ಗದತ್ತ ನಡೆದರು. ನವಯುಗ ಆರಂಭವಾದದ್ದು 1920 ಜುಲೈ 12 ರಂದು. ಆಗಸ್ಟ (?) ತಿಂಗಳಲ್ಲಿ ಕಲಕತ್ತೆಯಲ್ಲಿ ಸೇರಿದ ಕಾಂಗ್ರೆಸ ವಿಶೇಷ ಅಧಿವೇಶನವು ಅಸಹಕಾರದ ನಿರ್ಣಯವನ್ನು ಸ್ವೀಕರಿಸಿತು. ನ್ಯಾಯಾಲಯಗಳಿಗೂ ಶಾಲೆ ಕಾಲೇಜುಗಳಿಗೂ ಬಹಿಷ್ಕಾರ ಹಾಕುವದು ಈ ಕಾರ್ಯಕ್ರಮದ ಅಂಗವಾಗಿತ್ತು. ಸ್ವತಃ ನ್ಯಾಯವಾದಿಯಾಗಿದ್ದ ಫಜಲುಲ್ ಹಕ್‌ಗೆ ಈ ನೀತಿ ರುಚಿಸಲಿಲ್ಲ, ಆದ್ದರಿಂದ

ನವಯುಗದ ಜಾಮೀನು ಜಪ್ತಿಯಾದಾಗ ಅವನಿಗೆ ಸಂತೋಷವೇನೂ ಆಗಲಿಲ್ಲ; ಹೊಸ ಜಾಮೀನು ಒದಗಿಸುವದಕ್ಕೂ ಅವನು ಮುಂದಾಗಲಿಲ್ಲ. ಅದಕ್ಕೆ ಹಣವನ್ನು ಕೂಡಿಸುವವರೆಗೆ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು. ಅದು ಮತ್ತೆ ಆರಂಭವಾಗುವ ದಿನಕ್ಕಾಗಿ ಕಾಯುತ್ತ ತರುಣ ಸಂಪಾದಕರಿಬ್ಬರೂ ಜ. ಹಕ್ ಅವರ ಛಾಕರ (ಬಾರಿಸಾಲ) ಗ್ರಾಮದ ಮನೆಯಲ್ಲಿ ಅವರ ಆತಿಥ್ಯದಲ್ಲಿ ರಬಹುದೆಂದು ಹೇಳಿದರು. ಇಂತಹ ಸ್ನೇಹ ಸಂಪರ್ಕದಿಂದ ತರುಣ ಬರಹಗಾರರಿಬ್ಬರೂ ತಮ್ಮ ರಾಜಕೀಯ ವಿಚಾರಗಳಲ್ಲಿ ಜ. ಹಕ್‌ರವರನ್ನು ಸಮೀಪಿಸಬಹುದೆಂಬ ನಿರೀಕ್ಷೆ ಇದ್ದಿರಬಹುದು. ಆದರೆ ಅವರ ಅಭಿಪ್ರಾಯಗಳು ದೃಢವಾಗಿದ್ದವು. ಅವರು ಮತ್ತೆ ನವಯುಗವನ್ನು ಆರಂಭಿಸಿದಾಗ ಜ. ಹಕ್ ಅವರಿಂದ ಇನ್ನೂ ದೂರವಾದರು.

ಆ ಮೇಲೆ ಡಿಸೆಂಬರ 1920 ರಲ್ಲಿ ನಜರುಲ್ ಅನಿರೀಕ್ಷಿತವಾಗಿ ಪತ್ರಿಕೆಯನ್ನು ಬಿಟ್ಟು ಹೋದನು. ಸ್ವಲ್ಪ ದಿನಗಳಲ್ಲಿಯೇ ಅಹಮ್ಮದನೂ ಬಿಟ್ಟು ಹೋದನು. ನಜರುಲ್ ಕಲಕತ್ತೆಯನ್ನು ಬಿಟ್ಟು ದೇವಘರ ಎಂಬಲ್ಲಿಗೆ ಹೋಗಿ ವಿಶ್ರಾಂತಿಯನ್ನು ಪಡೆಯುವದೆಂದೂ ಮುಂದೆ ಪತ್ರಿಕಾವ್ಯವಸಾಯದಲ್ಲಿ ತನ್ನ ಶಕ್ತಿಯನ್ನು ಹಾಳು ಮಾಡದೆ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗುವದೆಂದೂ ಯೋಚಿಸಿದನು. ನಜರುಲ್ ದೇವಘರದಲ್ಲಿರುವಷ್ಟು ಕಾಲ ಮೊಸ್ಲೆಮ ಭಾರತದವರು ಅವನಿಗೆ ತಿಂಗಳೊಂದಕ್ಕೆ ಒಂದುನೂರು ರೂಪಾಯಿ ಕೊಡಬೇಕೆಂದೂ ಅದಕ್ಕೆ ಪ್ರತಿಯಾಗಿ ಅವನು ಬರೆದದ್ದನ್ನೆಲ್ಲ ಪ್ರಕಟಿಸುವ ಹಕ್ಕನ್ನು ಪಡೆಯುವರೆಂದೂ ಗೊತ್ತಾಗಿತ್ತು. ಈ ವ್ಯವಸ್ಥೆ ನೆರವೇರಲಿಲ್ಲ. ದೇವಘರದಲ್ಲಿ ನಜರುಲ್ ನಿರೀಕ್ಷಿಸಿದ ಹಣ ಅವರಿಂದ ಬರಲಿಲ್ಲ. ಅದು ಅವನಿಗೆ ಅಪರಿಚಿತವಾದ ಊರಾಗಿತ್ತು. ಎರಡು ತಿಂಗಳ ನಂತರ ಅವನು ಕಲಕತ್ತೆಗೆ ಮತ್ತೆ ಬರಬೇಕಾಯಿತು. ಮತ್ತೆ ಸ್ವಲ್ಪಕಾಲ ನವಯುಗಕ್ಕೂ ಬಂದು ಸೇರಬೇಕಾಯಿತು.

ದೇವಘರದಲ್ಲಿ ಅವನಿದ್ದ ಅಲ್ಪಕಾಲಾವಧಿಯ ಉಲ್ಲೇಖದಲ್ಲಿ ಗಮನಿಸಬೇಕಾದ ಅಂಶಗಳು ಎರಡು: ಯಾವ ಕಾಳಜಿಯನ್ನೂ ಹಚ್ಚಿಕೊಳ್ಳದ ಅವನ ಭೋಳೇ ಸ್ವಭಾವವೊಂದು: ಇದರಿಂದಲ್ಲವೆ ಅವನು ತನ್ನ ಊಟವಸತಿಗಳಿಗೆ ಕೊಡುವದಕ್ಕೂ ಕೈಯಲ್ಲಿ ಹಣವಿಲ್ಲದೆ ತನ್ನನ್ನು ಕರೆಯುವರಾರೂ ಇಲ್ಲದ ಅಪರಿಚಿತವಾದ ಊರಿಗೆ ಹೋದದ್ದು ! ಅಲ್ಲಿಗೆ ಹೋದ ನಂತರವೂ ಯಾವುದೋ ಕಾರಣಕ್ಕಾಗಿ ಅಲ್ಲಿ ವಿಶೇಷವಾದ ಯಾವ ಬರವಣಿಗೆಯನ್ನು ಮಾಡದೆ ಇದ್ದದ್ದು ಇನ್ನೊಂದು. ಅಲ್ಲಿ ಅವನು ಬರೆದದ್ದೆಲ್ಲ 'ಬೇದನಹರ' ಎಂಬ ಒಂದು ಹಾಡು, ಇನ್ನಾವುದೋ ಒಂದು. ಅದು ಹೇಗೋ ಅವನ ಅವಸ್ಥೆಯನ್ನು ತಿಳಿದು ಅಹಮ್ಮದ ದೇವಘರಕ್ಕೆ ಹೋಗಿ ಅವನನ್ನು ಕಲಕತ್ತೆಗೆ ಕರೆತಂದದ್ದನ್ನು ಆಗಲೇ ಹೇಳಿಯಾಗಿದೆ. (?) ಮುಜಪ್ಫರನೂ ನಜರುಲ್ ನಂತೆ ಸಾಮ್ರಾಜ್ಯಶಾಹಿಗೆ ವಿರೋಧಿಯಾಗಿದ್ದನು; ದುಡಿಮೆಯಿಂದ ಬದುಕುವ ಬಡಜನರ ಹಕ್ಕುಗಳನ್ನು ಬಲವಾಗಿ ಸಮರ್ಥಿಸುತ್ತಿದ್ದನು. ಇಷ್ಟಕ್ಕೆ ಮಿಕ್ಕಿದ ಇನ್ನಾವ ರಾಜಕೀಯ ಪಕ್ಷಪಾತಗಳಾದರೂ ಅವರಲ್ಲಿದ್ದುವೆಂದು ತಿಳಿಯುವದು ತಪ್ಪಾದೀತು. ಸನ್ 1920 ಮತ್ತು 1921 ರ ಪ್ರಾರಂಭದಲ್ಲಿ ನವಯುಗದಲ್ಲಿಯ ಬರವಣಿಗೆಯ ಪಕ್ಷಪಾತವು ಸ್ಪಷ್ಟವಿದ್ದರೂ ಅಹಮ್ಮದನು ಕಮ್ಯುನಿಸ್ಟ ಪಕ್ಷ

ದೊಡನೆ ಯಾವದೇ ಸಂಪರ್ಕವನ್ನಿಟ್ಟುಕೊಂಡಿರಲಿಲ್ಲವೆಂಬದು ಅವನ ಆತ್ಮಚರಿತ್ರೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ.

ಕೊನೆಗೆ ನವಯುಗದ ಸಂಬಂಧವನ್ನು ಪೂರ್ತಿಯಾಗಿ ಕಡಿದುಕೊಂಡು ನಜರುಲ್ ಇನ್ನೊಂದು ದುಸ್ಸಾಹಸದಲ್ಲಿ ಸಿಕ್ಕಿಕೊಂಡನು. ಇದೊಂದು ಜುಗುಪ್ಸಿತವಾದ ಘಟನೆಯೇ ಆಯಿತು. ಚಿಕ್ಕಮಕ್ಕಳಿಗಾಗಿ ಪುಸ್ತಕಗಳನ್ನು ಪ್ರಕಟಿಸುವದು ತನ್ನ ಉದ್ಯೋಗವೆಂದು ಹೇಳಿಕೊಳ್ಳುತ್ತಿದ್ದ ಅಲಿ ಅಕಬರಖಾನ ಎಂಬವನೊಬ್ಬನು ನಜರುಲ್ ಒಡನೆ ಗೆಳೆತನವನ್ನು ಬೆಳೆಸಿದ್ದನು. ಅವರ ಪರಿಚಯವು ಮೊಸ್ಲೆಮ ಭಾರತದ ಕಾರ್ಯಾಲಯದಲ್ಲಿ ಆಗಿತ್ತು. ನಜರುಲ್ ಅವನಿಗೆ 'ಲಿಚುಚೋರ' ಎಂಬ ಒಂದು ಸುಂದರವಾದ ಕವಿತೆಯನ್ನು ಬರೆದುಕೊಟ್ಟಿದ್ದನು. ಈಗ ಖಾನ ಒಂದು ಯೋಜನೆಯನ್ನು ಹಾಕಿಕೊಂಡು ಬಂದನು, ಅದಕ್ಕೆ ನಜರುಲ್ ಒಪ್ಪಿದನು. ಅಂದು ತಿಪ್ಪೇರಾ (ಇಂದು ಕೊಮಿಲ್ಲಾ) ಎಂದು ಕರೆಯಲಾಗುತ್ತಿದ್ದ ಪೂರ್ವಬಂಗಾಲದ ಜಿಲ್ಲೆಯಲ್ಲಿ ಖಾನನ ಮೂಲಸ್ಥಳ ದೌಲತಪುರವೆಂಬ ಗ್ರಾಮವಿತ್ತು. ಸನ್ 1921 ರ ಮಾರ್ಚ-ಏಪ್ರಿಲ್ ತಿಂಗಳಲ್ಲಿ ತನ್ನ ಜತೆಗೆ ನಜರುಲ್ ಅಲ್ಲಿಗೆ ಹೋಗುವದಕ್ಕೆ ಖಾನ ನಜರುಲ್‌ನ ಮನವಲಿಸಿದನು. ದಾರಿಯಲ್ಲಿ ಸಿಕ್ಕುತ್ತಿದ್ದ ಜಿಲ್ಲೆಯ ಮುಖ್ಯಪಟ್ಟಣವಾದ ಕೊಮಿಲ್ಲಾದಲ್ಲಿ ಅವರು ನಾಲ್ಕೈದು ದಿನ ಇದ್ದರು. ಅಲ್ಲಿ ಕಾಂದೀರಪರದಲ್ಲಿದ್ದ ಇಂದ್ರಕುಮಾರ ಸೇನಗುಪ್ತ ಎಂಬವರ ಮನೆಯಲ್ಲಿ ಇಬ್ಬರಿಗೂ ಒಳ್ಳೆಯ ಆತಿಥ್ಯ ದೊರೆಯಿತು. ಇಂದ್ರಕುಮಾರ ಬಾಬುಗಳ ಮಗ ಬಿರೇಂದ್ರಕುಮಾರ ಸೇನಗುಪ್ತನು ಅಲಿ ಅಕಬರನ ಸಹಪಾಠಿಯೂ ಸ್ನೇಹಿತನೂ ಆಗಿದ್ದನು. ಖಾನನ ಮಿತ್ರನ ಮನೆಯಲ್ಲಿ ನಜರುಲನಿಗೂ ಅಷ್ಟೇ ಪ್ರೀತಿಯ ಸ್ವಾಗತ ದೊರೆಯಿತು. ಅವರ ಪರಿವಾರ ಶ್ರೀಮಂತವೆಂದು ಹೇಳುವಂತಿರದಿದ್ದರೂ ಸುಶಿಕ್ಷಿತ ಮತ್ತು ಉದಾರಮನೋಭಾವದ ಮಧ್ಯಮವರ್ಗದ್ದಾಗಿತ್ತು. ಅವರಲ್ಲಿ ಸಾಹಿತ್ಯ ಸಂಗೀತಗಳ ಒಗ್ಗೆ ವಿಶೇಷವಾದ ಆಸಕ್ತಿಯಿತ್ತು. ಇದರಿಂದ ಅವರಿಗೆ ನಜರುಲ್ ಹೆಚ್ಚಾಗಿ ಬೇಕಾದವನಾದನು.

ಮನೆಯೊಡತಿ, ಇಂದ್ರಬಾಬುಗಳ ಹೆಂಡತಿ, ಬಿರಾಜಸುಂದರೀದೇವಿ ವಾತ್ಸಲ್ಯಮಯ ವ್ಯಕ್ತಿಯಾಗಿದ್ದಳು. ಅವಳಂತಹ ಗೃಹಿಣಿಯರಿಂದಾಗಿ ಬಂಗಾಲೀ ಸಮಾಜವು ಇಂದಿಗೂ ಸುಖಕರವೆನಿಸುತ್ತದೆ. ಅವಳ ಮಾತೃ ವಾತ್ಸಲ್ಯ ಎಷ್ಟು ಉದಾರವಾಗಿತ್ತೆಂದರೆ ಆ ಮನೆಗೆ ಬಂದ ಮಿತ್ರರೆಲ್ಲರೂ ಅವಳು ತಮ್ಮೆಲ್ಲರಿಗೂ ತಾಯಿ ಎಂದು ಭಾವಿಸುವಂತಿತ್ತು. ನಜರುಲನಂತಹ ಸರಳ ಸ್ವಭಾವದ ವ್ಯಕ್ತಿ ಇಂತಹ ನಿರ್ವ್ಯಾಜ ಪ್ರೀತಿಗೆ ಒಳಗಾಗುವದು ಸಹಜವಾಗಿತ್ತು. ಒಂದೆರಡು ದಿನಗಳಲ್ಲಿಯೇ ಅವನು ಬಿರಾಜಸುಂದರೀದೇವಿಯನ್ನು ಮಾ ಎಂದೂ ಅವಳ ನಾದಿನಿ ಗಿರಿಬಾಲಾ ದೇವಿಯನ್ನು ಮಾಸಿಮಾ ಎಂದು ಕರೆಯತೊಡಗಿದನು. ಈ ಗಿರಿಬಾಲಾ ದೇವಿ ವಿಧವೆಯಾಗಿದ್ದಳು. ಅವಳಿಗಿದ್ದ ಒಬ್ಬಳೇ ಮಗಳು ಪ್ರಮಿಲಾಳನ್ನು ದೂಲೀ ಇಲ್ಲವೆ ದೋಲನ ಎಂದು ಕರೆಯುತ್ತಿದ್ದರು. ಆಗ ಅವಳ ವಯಸ್ಸು 13 ಕ್ಕಿಂತ ಹೆಚ್ಚಿದ್ದಿರಲಾರದು. ಒಂದು ವಾರಕ್ಕೂ ಕಡಮೆ ಅವಧಿಯಲ್ಲಿ ಅವಳಿಗೂ ನಜರುಲಗೂ ಒಂದು ಸಹಜವಾದ ಸರಲವಾದ ಮೈತ್ರಿ ಉಂಟಾಯಿತು. ಅದೇ ಮುಂದೆ

ಎಷ್ಟುದೂರ ಹೋದೀತೆಂಬ ಕಲ್ಪನೆ ಅಂದು ಯಾರಿಗೂ ಬರುವಂತಿರಲಿಲ್ಲ. [ಏಕೆಂದರೆ ಮುಂದೆ ನಜರುಲ್ ಪ್ರಮಿಲೆಯನ್ನು ಮದುವೆಯಾದನು.] ಮುಂದಾಗುವದು ಅಂದು ಯಾರ ಮನಸಿನಲ್ಲಿಯೂ ಹೊಳೆದಿರಲಿಲ್ಲ. ಆಗ ಪ್ರಮಿಲಾ ಕೇವಲ 13 ವರ್ಷದ ಬಾಲಿಕೆಯಾಗಿದ್ದಳು.

ಕೊಮಿಲ್ಲಾದಲ್ಲಿ ನಾಲ್ಕೈದು ದಿನ ಮಾತ್ರ ಇದ್ದು ನಜರುಲ್ ಅಲಿ ಅಕಬರ ಖಾನನಜತೆಗೆ ದೌಲತಪುರಕ್ಕೆ ಹೋದನು. ಒಂದೆರಡು ತಿಂಗಳಲ್ಲಿಯೇ ಅನಿರೀಕ್ಷಿತವಾಗಿ ದೌಲತಪುರದಲ್ಲಿ ನಜರುಲ್‌ನ ಮದುವೆಗೆಂದು ಆಮಂತ್ರಣ ಬಂದದ್ದು ಕಲಕತ್ತೆಯಲ್ಲಿಯ ಅವನ ಮಿತ್ರರನ್ನು ದಿಗ್ಭ್ರಮೆಗೊಳಿಸಿತು. ಅವನ ಮದುವೆ ನರಗೀಜ ಬೇಗಮ (ಸಯೀದಾಖತೂನ) ಎಂಬವಳೊಡನೆ ಎಂದು ಆ ಪತ್ರದಲ್ಲಿ ಹೇಳಲಾಗಿತ್ತು. ಅವಳ ತಾಯಿ ಅಲಿ ಅಕಬರಖಾನನ ತಂಗಿ ವಿಧವೆಯಾಗಿದ್ದಳು. ಮದುವೆಯು 1921 ಜೂನ ಮಧ್ಯದಲ್ಲಿ ಎಂದು ಹೇಳಲಾಗಿತ್ತು.

ಕವಿಗಳ ವರ್ತನೆ ವಿಚಿತ್ರವಾಗಿರುವದೂ ಅವಸರದಲ್ಲಿ ಪ್ರೀತಿಸಿ ಕೂಡಲೇ ಮದುವೆಯಾಗುವದೂ ಹೊಸ ಮಾತಲ್ಲ. ಹಾಗೆ ನಜರುಲ್ ಸ್ವಭಾವದಿಂದಲೂ ಸಂಸ್ಕಾರದಿಂದಲೂ ಅಂತಹ ಕವಿಯೇ ಆಗಿದ್ದನು. ತನ್ನದೇ ಆದ ಹುಚ್ಚಿನ ಉತ್ಸಾಹದಿಂದ ಅವನು ಕೊಮಿಲ್ಲದ ಸೇನಗುಪ್ತ ಪರಿವಾರದ ಚಿಕ್ಕವರು ದೊಡ್ಡವರೆಲ್ಲರೂ ತನ್ನ ಬಳಗದವರಾಗಿ ದೌಲತಪುರದಲ್ಲಿ ತನ್ನ ಮದುವೆಗೆ ಬರಬೇಕೆಂದು ಒತ್ತಾಯ ಪಡಿಸಿದನು. ಇನ್ನೂ ವಿಚಿತ್ರವಾದ ಘಟನೆಗಳು ಎಲ್ಲರಿಗಾಗಿ ಕಾದಿದ್ದವು. ಮದುವೆಯ ದಿನವು ಹತ್ತಿರವಾಗುತ್ತಿದ್ದಂತೆಯೇ ಅಲಿ ಅಕಬರನು ತನ್ನನ್ನೊಂದು ಬಲೆಯಲ್ಲಿ ಹಾಕಿಕೊಳ್ಳುತ್ತಿದ್ದಾನೆಂಬದು ನಜರುಲನಿಗೆ ಹೊಳೆಯಿತು. ಮದುಮಗಳೇನೋ ನಜರುಲ್‌ಗೆ ಆಕರ್ಷಕಳಾಗಿ ತೋರಿದ್ದಳು. ಆದರೆ ಅವಳೊಬ್ಬ ಹಳ್ಳಿಯ ಹುಡುಗಿ. ಇಂತಹ ಸಂಬಧಕ್ಕೆ ಉಚಿತವಾದ ಶಿಕ್ಷಣವಾಗಲೀ ಸಾಮಾಜಿಕ ನಡೆವಳಿಕೆಗಳಾಗಲೀ ಅವಳಿಗಿರಲಿಲ್ಲ. ಬಹುಶಃ ತನ್ನದೆನ್ನುವಂತಹ ತಿಳುವಳಿಕೆಯೂ ಅವಳಿಗೆ ಇದ್ದಿರಲಾರದು. ನಜರುಲ್‌ಗೆ ಆಗಲೇ ಸಾಕಾಗಿತ್ತು. ಅದಕ್ಕೆ ಮೇಲಾಗಿ ಮದುವೆಯ ದಿನ ಅಲಿ ಅಕಬರಖಾನನು ಒಡ್ಡಿದ ಕರಾರುಗಳನ್ನು ನೋಡಿದರೆ ಅವನು ನಜರುಲನನ್ನು ಪೂರಾ ತನ್ನ ಹಿಡಿತಕ್ಕೆ ತೆಗೆದುಕೊಳ್ಳುವದಕ್ಕೆ ಹೊಂಚಿದ್ದಂತೆ ತೋರಿತು. ನಜರುಲ್‌ನ ಅಭಿಮಾನ ಇದನ್ನು ಸಹಿಸುವದು ಸಾಧ್ಯವಿರಲಿಲ್ಲ. ಆ ಕರಾರುಗಳನ್ನು ಅವನು ತಿರಸ್ಕರಿಸಿ ಯಾವ ಕಾಗದ ಪತ್ರಗಳಿಗೂ ತಾನು ಸಹಿ ಹಾಕುವದಿಲ್ಲವೆಂದನು. ಆದ್ದರಿಂದ ಆ ಮದುವೆಯು ವ್ಯವಹಾರ ರೀತಿಯಲ್ಲಾಗಲೀ ಕಾನೂನಿನಲ್ಲಾಗಲೀ ಊರ್ಜಿತವಾಗುವದು ಸಾಧ್ಯವಾಗಲಿಲ್ಲ. ನಜರುಲ್ ಸಿಡುಕಿನಿಂದ ದೌಲತಪುರವನ್ನು ಬಿಟ್ಟು ಕೊಮಿಲ್ಲಕ್ಕೆ ಬಂದನು. ಇದರಿಂದಾದ ಪೇಚಾಟವನ್ನೂ ಅಸಮಾಧಾನವನ್ನೂ ಅನುಭವಿಸಿ ಮರುದಿನವೇ ಸೇನಗುಪ್ತ ಪರಿವಾರದವರೂ ಅವನ ಹಿಂದೆಯೇ ಬಂದರು.

ಈ ವಿವಾದಕರವಾದ ಘಟನಾವಳಿಯು ಇಲ್ಲಿಗೆ ಮುಗಿಯಿತಾದರೂ ಅದನ್ನು ಕವಿದ ಮಂಜು ಇನ್ನೂ ಪೂರ್ತಿಯಾಗಿ ಹರಿದಿಲ್ಲ. ಕಲಕತ್ತೆಗೆ ಬಂದ ಮೇಲೆ ಮತ್ತೂ

ಒಮ್ಮೆ ಅಲಿ ಅಕಬರನು ನಜರುಲ್‌ನನ್ನು ಕಂಡು ತಮ್ಮ ಮುರಿದುಹೋದ ಗೆಳೆತನ ವನ್ನು ಕುದುರಿಸುವ ಯತ್ನ ಮಾಡಿದನೆಂದು ತಿಳಿದುಬರುತ್ತದೆ. ಆದರೆ ನಜರುಲ್ ಅತ್ತ ಯಾವ ಒಲವನ್ನೂ ತೋರಲಿಲ್ಲ. ಖಚಿತವಾಗಿ ನಡೆದದ್ದು ಏನೆಂಬದರ ಬಗ್ಗೆ ಅನೇಕರು ಇನ್ನೂ ಸಂಶಯಪಟ್ಟುಗೊಂಡೇ ಇದ್ದರು: ನಜರುಲ್ ದೌಲತಪುರವನ್ನು ಬಿಡುವ ಮೊದಲು ನಿಜವಾಗಿಯೂ ಮದುವೆ ನೆರವೇರಿತೆ ? ಇಲ್ಲ ಎಂದು ಮುಜಪ್ಫರ ಅಹಮದ ಹೇಳುವದೇ ಸತ್ಯವೆಂದು ನಮಗೂ ತೋರುತ್ತದೆ. ಅಹುದು ಎಂದು ಅನೇಕರ ಮನವಲಿಸುವದಕ್ಕೆ ಅಲಿ ಅಕಬರಖಾನ ಯತ್ನಿಸಿದರೂ ಆವನು ಆಧರಿಸುತ್ತಿದ್ದ ಪುರಾವೆಗಳು ಸಂಶಯಾತೀತವಾಗಿರಲಿಲ್ಲ. ಆದರೂ ಮದುವೆಯನ್ನು ಒಪ್ಪುವದಕ್ಕಿಂತ ಮುಂಚೆ ವಧೂವರರಿಬ್ಬರೂ ಪರಸ್ಪರ ಆಸಕ್ತರಾಗಿದ್ದರೆಂದು ನಂಬುವದಕ್ಕೆ ಕಾರಣ ಗಳಿವೆ. ನಜರುಲ ಇಸ್ಲಾಮ ಅವಳನ್ನು ನೋಡಿದಾಗ ನರ್ಗಿಸಬೇಗಂ ಪ್ರಾಯದ ಭರದಲ್ಲಿದ್ದಳೆಂದು ತೋರುತ್ತದೆ. ಅದರಿಂದ ಅವನು ಬೇಗನೆ ಅವಳ ಆಕರ್ಷಣೆಗೆ ಒಳಗಾಗಿ ನಿಜವಾಗಿಯೂ ತಮ್ಮಿಬ್ಬರಲ್ಲಿ ಪ್ರೀತಿಯೇ ಇದೆಯೆಂದು ಭಾವಿಸಿ ಪ್ರಾಮಾಣಿಕವಾಗಿಯೇ ಮದುವೆಗೆ ಒಪ್ಪಿದನು. ಆದರೆ ಈ ಸಂಧಿಯಲ್ಲಿ ಅಲಿ ಅಕಬರ ಖಾನನ ಗತ್ತುಗಾರಿಕೆ ತುಸು ಹೆಚ್ಚಾಯಿತೆಂದು ತೋರುತ್ತದೆ. ಅವನ ಸೊಸೆ (ನರ್ಗಿಸಬೇಗಂ) ಅವನ ಗತ್ತುಗಾರಿಕೆಯನ್ನು ಮುಂದರಿಸುವದಕ್ಕೆ ಬಳಸಿದ ಅವನ ಕೈಗೊಂಬೆಯಂತೆ ತೋರಿದಳು. ಈ ಮದುವೆಗೆ ಒಡ್ಡಿದ ಕರಾರುಗಳಿಂದ ತನ್ನ ಪ್ರಕಟನಾಲಯದ ವ್ಯವಹಾರದಲ್ಲಿ ನಜರುಲ್‌ನನ್ನು ಒಬ್ಬ ಬಾಡಿಗೆಯ ಬರಹಗಾರ ನಂತೆ ತನ್ನ ಹತೋಟಿಯಲ್ಲಿ ತೆಗೆದುಕೊಳ್ಳುವದು ಅವನ ಹಂಚಿಕೆಯಾಗಿತ್ತು. ಇದರಿಂದ ನಜರುಲ್ ಭ್ರಮನಿರಸನವಾಗಿ ಅವನು ತಿರುಗಿಬಿದ್ದನು. ಆದರೆ, ಪಾಪ, ಅವಳಿಗೆ ಮಾತ್ರ ಇದರ ಬಿಸಿತಟ್ಟದೆ ಹೋಗಲಿಲ್ಲವೆಂದು ಮುಂದಿನ ಘಟನೆಗಳಿಂದ ತೋರಿ ಬಂದಿತು. ಮುಂದೆ ಬಹುಕಾಲ ಅವಳು ಅವಿವಾಹಿತಳಾಗಿಯೇ ಉಳಿದಳು. ನಜರುಲ್ ನೊಡನೆ ಸಂಬಂಧವನ್ನು ಊರ್ಜಿತಗೊಳಿಸಲು ಯತ್ನಿಸಿದಳು. ಮೇಲಿಂದ ಮೇಲೆ ಕಾಗದಗಳನ್ನು ಬರೆದಳು. ಆದರೆ ನಜರುಲ್ ಅದರಲ್ಲಿ ಆಸಕ್ತಿಯನ್ನು ತೋರಲಿಲ್ಲ. ಅವನು ಬರೆದ ಒಂದೇ ಒಂದು ಕಾಗದ (ಜುಲೈ 1, 1937 ಸುಮಾರಿಗೆ) ಅವಳಂದದ್ದನ್ನೆಲ್ಲ ನಿರಾಕರಿಸುವದಾಗಿತ್ತು. ಇದಕ್ಕೆ ವ್ಯತಿರಿಕ್ತವೆಂದು ತೋರುವ ಒಂದೇ ಒಂದು ಹಾಡು ಅವನು ಎಚ್. ಎಮ್. ವಿ. ರೆಕಾರ್ಡಿಗಾಗಿ ಇದೇ ಸುಮಾರಿಗೆ ರಚಿಸಿದ್ದು ಹೀಗಿದೆ—

ಜಾರ ಹಾತೇ ದೀಯೆ ಮಾಲಾ ದೀತೇ ಪಾರೋ ನಾಯ್
ಕೇನೋ ಮನೇ ರಾಖಾ ತಾರೇ ?
ಭೂಲೇ ಯಾಓ ತಾರೇ ಭೂಲೇಯಾ ಓ ಏಕೇಬಾರೇ.

[ಯಾರಿಗೆಂದು ಕೋದ ಮಾಲೆ ಅವಗೆ ಕೊಡದೆ ಇರಿಸಿಕೊಂಡೆ
ಅವನನೇಕೆ ನಿನ್ನ ಮನದಿ ಉಳಿಸಿಕೊಂಡಿಹೆ ?
ಮರೆತುಬಿಡು ಮರೆತುಬಿಡು ಅವನನೊಮ್ಮೆ ಮರೆತುಬಿಡು].

ಇದೊಂದು ಪತ್ರ ಇದೊಂದು ಹಾಡು ಬಿಟ್ಟರೆ ಈ ವಿಷಯದಲ್ಲಿ ಇನ್ನೊಂದು ಪುರಾವೆಯಿಲ್ಲ. ಬಿಟ್ಟುಹೋದ ಸಂಬಂಧ ಬಿಟ್ಟೇಹೋಯಿತು. ಮುಂದೆ ಆ ಮಹಿಳೆ ಇನ್ನೊಬ್ಬ ಪತಿಯನ್ನು ಕಂಡುಕೊಂಡು ಸುಖವಾಗಿ ಸಂಸಾರಹೂಡಿದಳು. ಈ ರೀತಿ ಯಾಗಿ ಈ ಸಂಬಂಧ ನಿಜವಾಗಿ ಕೂಡಿತ್ತೆನ್ನುವ ಮುಂಚೆಯೇ ಬಿಟ್ಟುಹೋಗಿತ್ತು. ಆದರೆ ನಿಷ್ಕಾರಣವಾಗಿ ಕಹಿನೆನಪುಗಳನ್ನೂ ಒಂದು ವಿವಾದವನ್ನೂ ಅದು ಹಿಂದೆ ಉಳಿಸಿತು.

ವಿಚಿತ್ರವೆಂದರೆ, ದೌಲತಪುರದಲ್ಲಿ ನಡೆದ ಈ ಭಂಗದಿಂದಾಗಿ ನಜರುಲ್ ಮನದಲ್ಲಿ ತುಂಬಿನಿಂತಿದ್ದ ಹಾಡುಕವಿತೆಗಳು ಕಟ್ಟೆಯೊಡೆದು ಹರಿದವು. ಪೆಟ್ಟುತಿಂದ ನಜರುಲ್ ಮನಸು ತನ್ನದೇ ಸಮಾಧಾನದ ದಾರಿಯನ್ನು ಹುಡುಕಿಕೊಂಡಿತು. ಅವನು ಕೊಮಿಲ್ಲದಲ್ಲಿ ಸೇನಗುಪ್ತರ ಮನೆಯಲ್ಲಿ ಇದ್ದಕಾಲ ಮೂರು ವಾರಕ್ಕೂ ಕಡಿಮೆ (18 ಜೂನನಿಂದ 6 ಜುಲೈ 1921). ಇಷ್ಟೇ ಅವಧಿಯಲ್ಲಿ ಅವನ ಕಾವ್ಯ ಶಕ್ತಿಯ ನೆರೆಯೊಂದು ಬಂದು ಸರಿಯಿತು. ಆ ಗಳಿಗೆಯಲ್ಲಿ ಅವನ ಮನವನ್ನು ತುಂಬಿದ ಬೇರೆ ಬೇರೆ ವಿಷಯಗಳಿಂದ ಬೇರೆ ಬೇರೆ ತರದ ಕಾವ್ಯ ಹರಿದು ಬಂದಿತು. ಸನ್ 1921 ಮೇ-ಜೂನಸಲ್ಲಿ ಸಮಗ್ರ ಬಂಗಾಲದಲ್ಲಿ ಮತ್ತು ವಿಶೇಷವಾಗಿ ಕೊಮಿಲ್ಲದಲ್ಲಿ ಅಸಹಕಾರ ಚಳುವಳಿಯು ಸಿ. ಆರ್. ದಾಸರವರ ನೇತೃತ್ವದಲ್ಲಿ ಪ್ರಬಲಿಸಿತು. ಅದು ಕೂಡಲೇ ನಜರುಲ್‌ನಲ್ಲಿ ಮಾರ್ದನಿಪಡೆಯಿತು. ಆಗ ಪ್ರಸಿದ್ಧವಾಗಿದ್ದ ರಾಜಕೀಯ ಹಾಡುಗಳಲ್ಲಿ 'ಮರಣ-ಬರಣ' ಎಂಬುದು ನಜರುಲ್‌ನದಾಗಿತ್ತು. "ಏಸೋ, ಏಸೋ, ಏಸೋ, ಓಗೋ ಮರಣ" (ಬಾರೋ ಬಾರೋ ಬಾರೋ ಓಓ ಮರಣವೇ) ಎಂದು ಆರಂಭವಾಗುವ ಆ ಹಾಡು ಭಯವನ್ನು ತೊರೆದು ಮರಣವನ್ನು ಎದುರಿಸುವದಕ್ಕೆ ಜನಗಳನ್ನು ಹುರಿದುಂಬಿಸುತ್ತಿತ್ತು.

ಇಂತಹ ಕವಿತೆಗಳನ್ನು ನಾಗರಿಕ ಇಲ್ಲವೆ ಜನತಾ ಕಾವ್ಯವೆಂದು ಕರೆಯಬಹುದು. ಇವುಗಳ ಜೊತೆಯಲ್ಲಿಯೇ ಬೇರೊಂದು ಬಗೆಯ ಹಾಡು ಕವಿತೆಗಳೂ ಹೊರಬರು ತ್ತಿದ್ದವು. ಮುಂದೆ ಅವುಗಳನ್ನು 'ಪೂಬೇರಹವಾ' (ಪೂರ್ವದ ಗಾಳಿ) ಎಂಬ ಸಂಕಲನ ದಲ್ಲಿ ಪ್ರಕಟಿಸಲಾಯಿತು. ಅವುಗಳಲ್ಲಿ ಕವಿಯ ಕೋಮಲ ಭಾವಗಳು ಬಿಸಿಬಿಸಿಯಾಗಿ ರುಚಿರುಚಿಯಾಗಿ ತುಂಬಿದ್ದವು. ಉದಾಹರಣೆಗೆ—"ದುಪುರ ಅಭಿಸಾರ" (ನಡುಹಗಲ ಅಭಿಸಾರ): ಜಾಸ ಕೋಥಾ ಸಾಯ ಏಕೇಲಾ ಓ ತೂಯಿ ಅಲಾಸ ವೈಶಾಖೇ ? (ನಡೆದೆ ಎಲ್ಲಿಗೆ ಪ್ರಿಯಳೆ ಬೇಸಗೆ ಹಗಲು ನಡೆಯದೆ ಸೋತಿದೆ). ಇಲ್ಲವೆ ಸೇನಗುಪ್ತರ ಮನೆಯ ಮಕ್ಕಳನ್ನು ಕುರಿತು ಬರೆದ 'ರೇಶಮಿದೋರ' ಎಂಬುದು—

ತೋರಾ ಕೋಥಾ ಹಾತೇ ಕೇಮನೆ ಏಸೇ ಮಣಿಮಾಲರ ಮಾತೋ
ಆಮಾರ ಕಂಠೇ ಜರಾಲೀ ?

(ನೀವು ಬಂದುದೆಲ್ಲಿಯಿಂದ ಮಣಿಯಮಾಲೆ ತಂದು ನನ್ನ ಕೊರಳಸುತ್ತಿ ಹಿಡಿದಿರಿ ?)

ಇದರಲ್ಲಿ ಪ್ರೀತಿಗಾಗಿ ಹಾತೊರೆಯುತ್ತಿದ್ದ ಅವನ ಹೃದಯದ ಕರೆಯನ್ನೂ ಕೇಳಬಹುದು. ದೌಲತಪುರದಲ್ಲಿ ನಿರಾಶೆಯನ್ನುಂಡು ಬಂದ ತರುವಾಯದಲ್ಲಿ ಸೇನ ಗುಪ್ತರ ಮನೆಯಲ್ಲಿ ದೊರೆತ ಪ್ರೀತಿ ವಿಶ್ವಾಸಗಳನ್ನು ಅವನು ಉಂಡು ತಣಿದನು.

ನಜರುಲ್ ಮನದಲ್ಲಿ ನಿರಾಶೆ ಕವಿದಿದ್ದಾಗ ತಾಯಿಯಾಗಿ ಅವನನ್ನು ಸಲಹಿದ ಆ ಮನೆಯೊಡತಿಯನ್ನು ಕುರಿತು ಅವನು ಹಾಡಿದ 'ಸ್ನೇಹಾತುರ' ಎಂಬ ಗೀತ ದಲ್ಲೂ ಇದೇ ಭಾವವನ್ನು ಕಾಣಬಹುದು. ಇದೇ ಅವಧಿಯಲ್ಲಿ ಆ ತಾಯಿಯು ಕಳೆದುಕೊಂಡ ಚಿಕ್ಕ ಮಗಳೊಬ್ಬಳನ್ನು ಕುರಿತ 'ಅಭಿಮಾನಿನೀ' ಎಂಬ ವಿಷಣ್ಣ ಭಾವದ ದೀರ್ಘವಾದ ಕವಿತೆಯಲ್ಲಿಯೂ ಈ ಪರಿವಾರದ ಬಗ್ಗೆ ಅವನಿಗಿದ್ದ ಭಾವ ಗಳನ್ನೇ ಕಾಣಬಹುದು. ಒಂದೊಂದು ಹಾಡುಗಳಲ್ಲಿ ಆನಂದ ಉಲ್ಲಾಸಗಳ ಸೆಳಕು ಗಳನ್ನೂ ಕಾಣಬಹುದು. 'ಪುಲಕ' ಎಂಬ ಕವಿತೆಯಲ್ಲಿ ಕಾಣುವ ನಿಸರ್ಗದಲ್ಲಿಯ ವರ್ಣವೈಭವವು ಮೈಮರೆಸುವಂತಿದೆ. ದೃಶ್ಯ ಮತ್ತು ಶ್ರಾವ್ಯಗುಣಗಳಲ್ಲಿ ಏಕತಾನತೆ ಯನ್ನು ನಜರುಲ್ ಹೇಗೆ ಕಾಣುತ್ತಿದ್ದನೆಂಬದನ್ನೂ ಈ ಕವಿತೆಯಲ್ಲಿ ನೋಡಬಹುದು. ಈ ಅವಧಿಯಲ್ಲಿ ಬರೆದ ಬಹಳಷ್ಟು ಹಾಡು ಕವಿತೆಗಳನ್ನು ಮುಂದೆ ಬರೆದ ಬೇರೆಯವು ಗಳೊಡನೆ 1925 ರಲ್ಲಿ 'ಪೂಬೇರ ಹವಾ' ಸಂಕಲನದಲ್ಲಿ ಪ್ರಕಟಿಸಲಾಯಿತು. ಆದರೆ ಬರೆದು ಬರೆದಂತೆ ಆಗಾಗಲೇ ಅವು ಮೊದಲು ಪ್ರಕಟವಾದದ್ದು 1921 ರಲ್ಲಿ ಬಂಗಾಲಿ ಪತ್ರಿಕೆಗಳಲ್ಲಿಯೇ. ಆಗ ನಜರುಲ್ ಮತ್ತು ಮುಜಫ್ಫರ ಅಹಮದರಿಬ್ಬರೂ ಕಲಕತ್ತೆ ಯಲ್ಲಿ ತಮ್ಮ ವ್ಯವಸಾಯದೊಡನೆಯೇ ಸಾಹಿತ್ಯ ನಿರ್ಮಿತಿಯಲ್ಲಿಯೂ ತೊಡಗಿದ್ದರು.

ಸಮಸ್ತ ಭಾರತದಲ್ಲಿಯಂತೆಯೇ ಬಂಗಾಲದಲ್ಲಿಯೂ 1921 ವರ್ಷದ ಕಾಲವೇ ಅಂತಹದಿತ್ತು. ಆಗ ನಡೆಯುತ್ತಿದ್ದ ಕೋಲಾಹಲದಲ್ಲಿ ಸೇರದೆ ಹೊರಗುಳಿಯಬೇಕಾ ದರೆ ಅಂತಹ ಮನುಷ್ಯನೊಬ್ಬ ಲೋಕಕ್ಕೆ ಹೊರತಾದ ಸ್ವಾರ್ಥಿಯಾಗಿರಬೇಕಿತ್ತು. ಅಂಥವನೊಬ್ಬ ಮಾತ್ರ ತನ್ನ ಕಾಳಜಿಯೇ ದೊಡ್ಡದು ಎಂದು ಭಾವಿಸಬಹುದಿತ್ತು. ನಜರುಲ್ ಅಂಥವನಾಗಿರಲಿಲ್ಲ. ಆಗಲೇ ಹೇಳಿದಂತೆ ಅವನು ದೌಲತಪುರದ ವಿಷಾದಕರವಾದ ಘಟನೆಗಳನ್ನು ಕೊಮಿಲ್ಲದಲ್ಲಿರುವಾಗಲೇ ಸೇನಗುಪ್ತ ಮನೆಯವರ ಸ್ನೇಹದಲ್ಲಿ ಮರೆತಿದ್ದನು. ಅದೇ ಸಮಯಕ್ಕೆ ಪೂರ್ವಬಂಗಾಲದಲ್ಲಿ ಹಬ್ಬಿದ ರಾಜ ಕೀಯ ಚಳುವಳಿಯೂ ಅದನ್ನು ಮರೆಯಿಸಿತು. ಕಲಕತ್ತೆಗೆ ಮರಳಿ ಬರುತ್ತಲೇ ಅವನು ತನ್ನ ವಾಡಿಕೆಯ ಜೀವನಕ್ರಮದಲ್ಲಿ ತೊಡಗಿಕೊಂಡನು : ಮಿತ್ರರ ಸಹವಾಸ, ರಾಜಕೀಯ ಆಂದೋಲನ, ಸಾಹಿತ್ಯಿಕ ಚಟುವಟಿಕೆಗಳು, ಮತ್ತು ಬಂಗಾಲಿ ಸಮಾಜಕ್ಕೆ ವಿಶಿಷ್ಟವೆನಿಸಿದ ಆಗಾಗ ಸೇರುತ್ತಿದ್ದ 'ಅಡ್ಡಾ'ಗಳು, ಸಂಗೀತಕಚೇರಿಗಳು. ಇನ್ನೂವರೆಗೂ ಅವನ ಜೀವನೋಪಾಯದ ಉದ್ಯೋಗವು ಅನಿಶ್ಚಿತವಾಗಿಯೇ ಇತ್ತು. ಒಂದು ದಿನಪತ್ರಿಕೆಯನ್ನು ಆರಂಭಿಸುವದಕ್ಕಾಗಿ ಹಣವನ್ನು ಕೂಡಿಸುವ ವ್ಯವಸ್ಥೆಯೆಂದು ಅಹಮ್ಮದ ಒಂದು ಲಿಮಿಟೆಡ್ ಕಂಪನಿ ಹೂಡುವ ಸಾಹಸದಲ್ಲಿದ್ದನು. ಅದು ಈಡೇರಲಿಲ್ಲ. ಆದರೆ ಇದಾವುದೂ ನಜರುಲ್ ತನ್ನ ಗೀತಗಳನ್ನೂ ಕವಿತೆಗಳನ್ನೂ ರಚಿಸುತ್ತಲೇ ಇರುವದಕ್ಕೆ ತೊಡಕಾಗಿರಲಿಲ್ಲ.

ಸನ್ 1921-22 ರಲ್ಲಿಯ ಅವನ ಎರಡು ಗಣನೀಯವಾದ ಕೃತಿಗಳು ಕವಿ ಸತ್ಯೇಂದ್ರನಾಥ ದತ್ತರನ್ನು ಕುರಿತಾಗಿದ್ದವು. (ಈ ಸತ್ಯೇಂದ್ರನಾಥನು ಟಾಗೋರನಿಗೆ ಮಾತ್ರ ಎರಡನೆಯವನು ಎಂದು ಎಣಿಸಲಾಗುತ್ತಿತ್ತೆಂದು ಆಗಲೇ ಹೇಳಿಯಾಗಿದೆ). ಕೇವಲ ನಲವತ್ತರ ಪ್ರಾಯದಲ್ಲಿಯೇ ಸತ್ಯೇಂದ್ರನಾಥನ ದೃಷ್ಟಿ ಕ್ಷೀಣವಾಗುತ್ತ

ನಡೆದಿತ್ತು ಮತ್ತು ಅವನ ಅಕಾಲಿಕ ಮರಣವು ದೂರವಿರಲಿಲ್ಲ. (24-6-1922). ಅವನ ಸ್ಥಿತಿಗೆ ಮರುಗುತ್ತ ನಜರುಲ ಸಪ್ಟಂಬರ 1921 ರಲ್ಲಿ 'ದಿಲ್‌ದರದೀ' ಎಂಬ ಕವಿತೆಯನ್ನು ಬರೆದನು. ಅದರಲ್ಲಿ ವ್ಯಕ್ತವಾದ ಶುದ್ಧಭಾವವನ್ನು ಗುರುತಿಸಿ ಅವನಿಗಿಂತ ಹಿರಿಯನಾದ ಸತ್ಯೇಂದ್ರನಾಥನು ಅವನನ್ನು ಹುಡುಕಿಕೊಂಡು ತಲತೋಲಾ ಬೀದಿಯಲ್ಲಿಯ ಅವನ ಮನೆಗೆ ಬಂದನು. ಆದರೆ ದುರ್ದೈವದಿಂದ ನಜರುಲ್ ಮನೆಯಲ್ಲಿ ಸಿಗದೆಹೋದ ಕಾರಣ ಆ ಭೇಟಿ ನಡೆಯಲಿಲ್ಲ. ಆ ಕವಿಗಳಿಬ್ಬರ ದೃಷ್ಟಿಯೂ ಹೊಂದಿಕೆಯಾಗುತ್ತಿದ್ದ ಅನೇಕ ವಿಷಯಗಳಿದ್ದವು: ಉಜ್ವಲವಾದ ದೇಶಪ್ರೀತಿ, ಸಾಮಾಜಿಕ ವಿಚಾರಗಳಲ್ಲಿ ಪ್ರಗತಿಶೀಲತೆ, ಕಾವ್ಯದ ಲಯಬಂಧಗಳಲ್ಲಿ ಉನ್ನತ ಮಟ್ಟದ ಆಸಕ್ತಿ. ಮುಂದೆ ಒಂದೇ ವರ್ಷದಲ್ಲಿ ಸತ್ಯೇಂದ್ರನಾಥನ ಜೀವನ ಕೊನೆಗೊಂಡಿತು. ಆ ದುಃಖಮಯವಾದ ಸಂದರ್ಭ ಟಾಗೋರರ ಒಂದು ದಿವ್ಯವಾದ ಕವಿತೆಯ ವಿಷಯವಾಗಿದೆ. ಅಷ್ಟೇ ದಿವ್ಯವಾದ ಗೀತವೊಂದನ್ನು ನಜರುಲ್ ರಚಿಸಿ ಆಗ ಸೇರಿದ ಅನುಶೋಚನ ಸಭೆಯಲ್ಲಿ ತನ್ನ ಅಳಲನ್ನು ತೋಡಿಕೊಂಡನು:

> ಚಲಚಂಚಲ ಬಾಣೀರ ದುಲಾಲ ಎಸೇ ಛಿಲೋ ಪಥಭೂಲೇ
> ಓಗೋ ಏಇ ಗಂಗಾರ ಕೂಲೇ
> ಚಲಚಂಚಲ ವಾಣಿಯ ಮೋಹದ ಕುವರನೆ ದಾರಿತಪ್ಪಿ ಬಂದೆಯಾ
> ಓ, ಈ ಗಂಗಾ ಕೂಲದಲಿ.

ಇದೇ ಸಂದರ್ಭದಲ್ಲಿ ನಜರುಲ್ ಸತ್ಯೇಂದ್ರನಾಥನ ನೆನಪಿಗೆ ಅರ್ಪಿಸಿದ ಇನ್ನೊಂದು ಕಾಣಿಕೆ 'ಸತ್ಯಕವಿ' ಎಂಬ ಕವಿತೆ. ಇದು ಸತ್ಯೇಂದ್ರನಾಥನ ವ್ಯಕ್ತಿತ್ವಕ್ಕೂ ಕವಿತ್ವಕ್ಕೂ ತಕ್ಕುದಾಗಿದೆ. ಇದರಲ್ಲಿ ಕಂಡುಬರುವ ಅಂತಃಕರಣ ಮತ್ತು ಕಾವ್ಯಶಕ್ತಿಗಳು ನಜರುಲ್‌ನಿಗೆ ಕೀರ್ತಿಯನ್ನು ಗಳಿಸಿದವು. ಇಬ್ಬರೂ ಕವಿಗಳು ಸತ್ಯದಲ್ಲಿ ದೃಢವಾದ ಶ್ರದ್ಧೆಯುಳ್ಳವರು, ಸಮಕಾಲೀನ ಘಟನೆಗಳಿಗೂ ಜನಸಾಮಾನ್ಯರ ಹೋರಾಟಕ್ಕೂ ತಮ್ಮ ಕಾವ್ಯಶಕ್ತಿಯನ್ನು ಪ್ರಾಮಾಣಿಕವಾಗಿ ವಿನಿಯೋಗಿಸಿದವರು.

ಈ ವಿದ್ಯಮಾನಗಳು ಜುಲೈ 1921-22 ಅವಧಿಯಲ್ಲಿ ಒಂದು ಸಂಕ್ರಾಂತಿ ಕಾಲದಲ್ಲಿದ್ದವು. ಗುರುತರವಾದ ಕಾರಾವಾಸದ ಶಿಕ್ಷೆಗಳನ್ನು ಹೊಂದಿ ಜೇಲಿಗೆ ಹೋದವರ ಮೊದಲ ತಂಡದಲ್ಲಿ ಅಲಿ ಬಂಧುಗಳು ಎಂದು ಪ್ರಸಿದ್ಧರಾಗಿದ್ದ ಮೌಲಾನಾ ಮೊಹಮ್ಮದ ಅಲಿ ಮತ್ತು ಮೌಲಾನಾ ಶೌಕತ ಅಲಿ ಇಬ್ಬರೂ ಇದ್ದರು. ಅವರನ್ನು ಜೇಲಿಗೆ ಕಳಿಸಿದ ಸಂದರ್ಭ 'ಕರಾಚಿ ಖಟ್ಲೆ' ಎಂದು ಪ್ರಸಿದ್ಧವಾದುದಾಗಿತ್ತು. ಆಗ ರಾಷ್ಟ್ರದಲ್ಲಿ ಉಕ್ಕಿದ ಕೋಪವನ್ನು ನಜರುಲ್ ತನ್ನ ಕವಿತೆಗಳಲ್ಲಿ ವ್ಯಕ್ತಪಡಿಸಿದನು. ಆಗ ರಾಷ್ಟ್ರದಲ್ಲಿ ಕಂಡು ಬಂದದ್ದು ಬರಿಯ ಕೋಪವಾಗಿರದೆ ದೃಢನಿರ್ಧಾರವೂ ಭವಿಷ್ಯತ್ತಿನಲ್ಲಿ ವಿಶ್ವಾಸವೂ ಸೇರಿಕೊಂಡಿದ್ದವು. ಗಾಂಧೀಜಿಯವರು 'ಒಂದೇ ವರ್ಷದಲ್ಲಿ ಸ್ವರಾಜ್ಯ' ಎಂದು ಘೋಷಿಸಿದ ವರ್ಷವೇ ಅದಾಗಿತ್ತು. ರಾಷ್ಟ್ರೀಯ ಚಳುವಳಿಯು ಹಿಂದೆಂದೂ ಕಾಣದಂತಹ ಪ್ರವಾಹವಾಗಿ ಹರಿಯುತ್ತ ವಾರದಿಂದ ವಾರಕ್ಕೆ ತಿಂಗಳಿಂದ ತಿಂಗಳಿಗೆ ಬಲಗೊಳ್ಳುತ್ತಿತ್ತು. ವರ್ಷದ ಕೊನೆಯ

ಭಾಗದಲ್ಲಿ ಬ್ರಿಟಿಶ್ ಆಳರಸರು ಹಂಗುದೊರೆದು ತಿರುಗಿ ನಿಂತರು. ಕ್ರೋಧಾವಿಷ್ಟ ರಾಗಿ ನಿರ್ಲಜ್ಜರಾಗಿ ಸಿಕ್ಕಾಪಟ್ಟೆ ತಿರುಗಿ ಹೊಡೆದರು. ಚಳವಳಿಯನ್ನು ಮುರಿದು ಕಾಂಗ್ರೆಸ ವ್ಯವಹಾರಗಳನ್ನು ಮುಗಿಸಿಬಿಡಬೇಕೆಂಬದು ಅವರ ನಿರ್ಧಾರವಾಗಿತ್ತು. ಸ್ವರಾಜ್ಯದ ಕಾರ್ಯಕ್ರಮಗಳನ್ನು ಬಲವಾಗಿ ಸಾಗಿಸುತ್ತಿದ್ದ ಕಾಂಗ್ರೆಸ ಸ್ವಯಂ ಸೇವಕ ದಳವನ್ನು ಎಲ್ಲ ಪ್ರಾಂತಗಳಲ್ಲಿಯೂ ನಿಷೇಧಿಸಲಾಯಿತು. ಇದಕ್ಕುತ್ತರವಾಗಿ ಕಾಂಗ್ರೆಸ ಕಾರ್ಯಕರ್ತರು ಶಾಂತಿಯುತವಾದ ಕಾಯದೇ ಭಂಗವನ್ನು ಹೂಡಿದರು. ಸತ್ಯಾಗ್ರಹವು ಸಾಮೂಹಿಕವಾದ ಆಚರಣೆಯಲ್ಲಿ ಬಂದಿತು. ಸಾವಿರಾರು ಜನ ಸ್ತ್ರೀ ಪುರುಷರೆಲ್ಲರೂ ಜೇಲಿಗೆ ಹೋಗುವದಕ್ಕೆ ಮುಂದಾದರು. ಕಲಕತ್ತೆಯಲ್ಲಿ ಮೊದಲು ಜೇಲಿಗೆ ಹೋದ ಮೂವರು ಮಹಿಳಾ ಸತ್ಯಾಗ್ರಹಿಗಳಿಗೆ ಸಿ.ಆರ್. ದಾಸರ ಸಹಧರ್ಮಿಣಿ ಬಾಸಂತೀದೇವಿ ಮುಂದಾಳಾಗಿದ್ದರು. ಅವರ ಹಿಂದೆಯೇ ದೇಶದಾದ್ಯಂತವೂ ನೂರಾರು ಜನ ಜೈಲು ಸೇರಿದರು. ಆಗ ಶಾಂತಿಯುತವಾದ ಸತ್ಯಾಗ್ರಹವನ್ನು ನಡೆಸಿ, ಕೋರ್ಟುಗಳಲ್ಲಿ ಆತ್ಮ ಸಮರ್ಥನೆಯ ಅಧಿಕಾರವನ್ನು ನಿರಾಕರಿಸಿ ಶಿಕ್ಷೆಗಳನ್ನು ಅನು ಭವಿಸಿದವರು ಮುಂದಾಳುಗಳು ಸ್ವಯಂಸೇವಕರು ಮಾತ್ರವಲ್ಲದೆ ಅವರ ಹಿಂದೆ ಸಾವಿ ರಾರು ಜನಸಾಮಾನ್ಯರೂ ಇದ್ದರು. ಅವರೆಲ್ಲರನ್ನೂ ಇಡುವದಕ್ಕೆ ಜೈಲುಗಳೂ ಸ್ಪೆಶಲ್ ಜೈಲುಗಳೂ ಸಾಲದಾದವು. ಆಮೇಲೆ ಕೈದು ಮಾಡಿದವರನ್ನು ನ್ಯಾಯಾಸ್ಥಾನಕ್ಕೆ ಒಯ್ಯದೆ ಹೊಡೆದು ಹಿಂಸಿಸಿ ಬಿಟ್ಟುಬಿಡುವುದಕ್ಕೆ ಆರಂಭವಾಯಿತು. ಅದಕ್ಕೂ ಜನರು ಹಿಂಜರಿಯಲಿಲ್ಲ. ಕಾಂಗ್ರೆಸ ಮುಂದಾಳುಗಳಿಗೆ ಇಂತಹ ಕಷ್ಟಗಳನ್ನು ಅನುಭವಿಸುವದು ಇದೇ ಮೊದಲಸಲವಾಗಿತ್ತು: ಚಿತ್ತರಂಜನದಾಸ, ಮೋತಿಲಾಲ ನೆಹರೂ, ಹಕೀಮ ಅಜಮಲಖಾನ, ಡಾ. ಅನಸಾರಿ, ಇವರಿಗೆ ಕಿರಿಯರಾದ ಜವಾಹರಲಾಲ ನೆಹರೂ, ಸುಭಾಸಚಂದ್ರ ಬೋಸ, ಮುಂತಾದವರಿಗೆ ಈ ಮೊದಲು ಇಂತಹ ಕಷ್ಟದ ಅನುಭವ ವಿರಲಿಲ್ಲ. ತರುವಾಯದ ಕಾಲದಲ್ಲಿ 1947 ರಲ್ಲಿ ಸ್ವರಾಜ್ಯವು ಬರುವವರೆಗೆ ಅವರು ಇಂತಹ ಜೈಲು ವಾಸವನ್ನು ಅನೇಕ ಬಾರಿ ಅನುಭವಿಸಬೇಕಾಗಿ ಬಂದದ್ದು ಸರ್ವ ವಿದಿತವಾಗಿದೆ. ಸ್ವಾತಂತ್ರ್ಯಕ್ಕೆ ಹಾತೊರೆಯುತ್ತಿದ್ದ ಲಕ್ಷಾಂತರ ಜನರಿಗೆ ಬ್ರಿಟಿಶರ ಜೈಲುಗಳ ಭಯವೇ ಇಲ್ಲದಂತಾಯಿತು. ಜೈಲು ವಾಸವೆಂದರೆ ದೇಶಸೇವೆಗೆ ಬಹುಮಾನವಾಗಿ ದೊರೆತ ಪದಕವಾಯಿತು. ಕವಿಗಳಲ್ಲಿಯೂ ಜನಸಾಮಾನ್ಯರಲ್ಲಿಯೂ ನೈತಿಕ ಬಲವನ್ನು ಬೆಳೆಯಿಸುವದಕ್ಕೆ ಅದೊಂದು ಸಾಧನವಾಯಿತು.

ಕಾಂಗ್ರೆಸಿನ ವಾರ್ಷಿಕ ಅಧಿವೇಶನವು 1921 ಡಿಸಂಬರ ಕೊನೆಯಲ್ಲಿ ಅಹಮದಾ ಬಾದಿನಲ್ಲಿ ಸೇರಿತು. ಅದಕ್ಕೆ ಅಧ್ಯಕ್ಷರಾಗಬೇಕಿದ್ದ ಸಿ. ಆರ್. ದಾಸ ಇನ್ನೂ ಜೈಲಿ ನಲ್ಲಿದ್ದರು. ಕಾಂಗ್ರೆಸಿನ ಬಹುಶಃ ಎಲ್ಲ ಮುಂದಾಳುಗಳೂ ಜೈಲಿನಲ್ಲೇ ಇದ್ದರು. ಹೊರಗೆ ಉಳಿದವರು ಮಹಾತ್ಮಾಗಾಂಧಿ ಒಬ್ಬರೇ. ಅವರನ್ನು ಹೊರಗುಳಿಸಿದ್ದು ಮೊದಲಿಗೆ ಒಂದು ಗತ್ತುಗಾರಿಕೆ ಎಂದು ತೋರಿತ್ತು. ಆದರೆ ಮುಂದೆ ನಡೆದ ಅನಿರೀಕ್ಷಿತವಾದ ಘಟನೆಗಳು ಅದು ನಿಜವಾಗಿಯೂ ಬುದ್ಧಿವಂತಿಕೆಯ ಕೆಲಸವಾಯಿ ತೆಂದು ತೋರಿಸಿದವು. ಜನತೆಯ ಕೋಪದಿಂದ ತುಂಬಿದ ದೇಶವೊಂದು ಮದ್ದಿನ ಕೋಠಿಯಂತಿದ್ದಾಗ ಅದಕ್ಕೆ ರೊಚ್ಚಿಗೆದ್ದ ಜಂಗುಳಿಯು ಕೊಳ್ಳಿಯಿಡದಂತೆ ತಡೆಯು

ವದು ಮಹಾತ್ಮರ ಹೊರತು ಇನ್ನಾರಿಗೂ ಸಾಧ್ಯವಿರಲಿಲ್ಲ. ಸನ್ 1921 ರ ಆ ಕಾಲದಲ್ಲಿ ಯಾವ ಕ್ಷಣದಲ್ಲಿ ಏನಾಗುವದೋ ಎಂದು ಎಲ್ಲರೂ ಉಸಿರು ಬಿಡದೆ ಕಾಯುತ್ತಿದ್ದರು. ಹೀಗೆ ಬಿಗಿದುಕೊಂಡಿದ್ದ ವಾತಾವರಣದಲ್ಲಿ ಅಹಮದಾಬಾದಿನಲ್ಲಿ ಸ್ವರಾಜ್ಯದ ಘೋಷಣೆ ಹೊರಬೀಳುವದಿತ್ತು. ಜನತೆಯ ಪ್ರತಿನಿಧಿಗಳು ಸೇರಿ ಚದರಿದರು. ಸನ್ 1922 ಆರಂಭದಲ್ಲಿ ರಾಷ್ಟ್ರೀಯ ಯುದ್ಧದ ನಿರ್ಣಾಯಕವಾದ ದಿನ ದೂರವಿಲ್ಲೆಂದು ತೋರಿತು. ಮುಂದಿನ ಕಾರ್ಯಕ್ರಮವು ಕರನಿರಾಕರಣೆಯಿಂದ ಆರಂಭವಾಗಿ ಶಾಂತಿಯುತವಾಗಿ ಸ್ವರಾಜ್ಯವು ಕೈಗೆ ಬರುವವರೆಗೆ ನಡೆಯುವದಿತ್ತು. ಎಲ್ಲವೂ ಸಿದ್ಧವಾಗಿ ಗಾಂಧೀಜಿಯವರ ಅಪ್ಪಣೆಗಾಗಿ ಕಾಯುತ್ತಿತ್ತು.

ಈ ಪ್ರಕರಣವನ್ನು ವಿಸ್ತರಿಸುವದು ಸಾಕು. ಸನ್ 1921-22 ರಲ್ಲಿ ನಜರುಲ್ ಜೀವನ ಮತ್ತು ಕೃತಿಗಳ ಹಿನ್ನೆಲೆಯನ್ನು ತಿಳಿಸಿದ್ದಾಯಿತು. ಆದರೆ ನಿರೀಕ್ಷಿಸಿದಂತೆ ಆದಾವುದೂ ನಡೆಯಲಿಲ್ಲ. ಜನರ ಉತ್ಸಾಹ ಪ್ರಕೋಪಗಳು ಸೊಕ್ಕಿ ಮುಂಚಿತವಾಗಿಯೇ ಕಟ್ಟೆಯೊಡೆದು ಹರಿದವು. ಉತ್ತರ ಪ್ರದೇಶದ ಚೌರಿಚೌರಾ ಎಂಬ ಗ್ರಾಮದಲ್ಲಿ ಜನವರಿ ತಿಂಗಳಲ್ಲಿ ಭಯಂಕರವಾದ ದುರ್ಘಟನೆಯೊಂದು ನಡೆಯಿತು. ಚಳವಳಿಯನ್ನು ನಿಲ್ಲಿಸದೆ ಗತ್ಯಂತರವಿಲ್ಲವೆಂದರು ಗಾಂಧೀಜಿ. ಜನತೆಯು ಅಹಿಂಸೆಯ ಪಾಠವನ್ನು ಸರಿಯಾಗಿ ಕಲಿತಿಲ್ಲವೆಂದರು. ಸ್ವಲ್ಪವೂ ತಡಮಾಡದೆ ಫೆಬ್ರುವರಿ 1922 ರಲ್ಲಿ ಕಾಂಗ್ರೆಸ ವರ್ಕಿಂಗ ಕಮಿಟಿಯು ಗುಜರಾತಿನ ಬಾರಡೋಲಿಯಲ್ಲಿ ಸೇರಿ ಗಾಂಧೀಜಿಯವರು ಹೇಳಿದಂತೆ ನಿರ್ಣಯ ಮಾಡಿತು. ದೇಶಾದ್ಯಂತವೂ ಚಳವಳಿಯನ್ನು ನಿಲ್ಲಿಸುವದಕ್ಕೆ ಈ ನಿರ್ಣಯವು ಕರೆಕೊಟ್ಟಿತು. ಕಾಂಗ್ರೆಸು ಮುಂದೆ ಸಾಗಿಸಬೇಕಾದ ಕಾರ್ಯಕ್ರಮವು ವಿಧಾಯಕವಾಗಿರಬೇಕೆಂದರು : ನೂಲುವದು, ನೇಯುವುದು, ಗ್ರಾಮೋದ್ಧಾರ, ಹಿಂದೂ-ಮುಸ್ಲಿಮರ ಸಾಮರಸ್ಯ, (ಇದಕ್ಕೆ ಮುಂದೆ ಅಸ್ಪೃಶ್ಯತಾನಿವಾರಣೆಯನ್ನೂ ಸೇರಿಸಲಾಯಿತು). ಗಾಂಧಿಯವರ ನೇತೃತ್ವದಲ್ಲಿ ಸ್ವರಾಜ್ಯಕ್ಕೆಂದು ಆರಂಭವಾದ ಪ್ರತ್ಯಕ್ಷ ಹೋರಾಟದ ಮೊದಲನೆಯ ಹಂತ ಇಲ್ಲಿಗೆ ಮುಗಿಯಿತು. ಉಪ್ಪಿನ ಸತ್ಯಾಗ್ರಹ, ಸವಿನಯ ಕಾಯದೇಭಂಗಗಳ ಎರಡನೆಯ ಹಂತವು 1930 ರಲ್ಲಿ ಆರಂಭವಾಯಿತು. ಈ ಮಧ್ಯಂತರದಲ್ಲಿ ಗಾಂಧೀಜಿಯವರ ಜೈಲುವಾಸ, ಸಿ. ಆರ್. ದಾಸ ಮತ್ತು ಮೋತಿಲಾಲ ನೆಹರೂ ಅವರ ನೇತೃತ್ವದಲ್ಲಿ ಸ್ವರಾಜ್ಯ ಪಾರ್ಟಿಯವರು ಪಾರ್ಲಿಮೆಂಟಿನಲ್ಲಿ ನಡೆಸಿದ ಹೋರಾಟಗಳು ನಡೆದವು. ಈ ಅವಧಿಯಲ್ಲಿಯೇ ನಜರುಲ್ ಜನತೆಯ ಕ್ರಾಂತಿ ಪುನರುತ್ಥಾನಗಳ ಕವಿಯಾಗಿ ಉಲ್ಕೆಯಂತೆ ಬೀಸಿ ಬೆಳಗಿದನು.

## 3. ‘ಬಿದ್ರೋಹಿ ಕವಿ’

‘ಸ್ವರಾಜ್ಯ ವರ್ಷ’ವು ಅತ್ಯುಲ್ಬಣ ಸ್ಥಿತಿಯನ್ನು ಮುಟ್ಟಿದ್ದು ನವಂಬರ-ಡಿಸೆಂಬರ 1921ರಲ್ಲಿ ಎಂದು ಆಗಲೇ ಹೇಳಿದೆ. ಬಂಗಾಲದಲ್ಲಿ ಡಿಸೆಂಬರ 10ನೆಯ ದಿನ ಸಿ. ಆರ್. ದಾಸರನ್ನು ಜೈಲಿಗೆ ಸೇರಿಸಿದರು. ಅದೇ ವೇಳೆಗೆ ಸುಮಾರಾಗಿ ಕಾಂಗ್ರೆಸಿನ ಎಲ್ಲ ಕಾರ್ಯಕರ್ತರನ್ನೂ ಮುಖಂಡರನ್ನೂ ಅವರವರ ಕಾರ್ಯಕ್ಷೇತ್ರಗಳಿಂದ ಎಳೆದುಕೊಂಡು ಹೋಗಿ ಜೈಲಿನಲ್ಲಿ ಕೂಡಿಹಾಕಿದರು. ದೇಶಬಂಧು ದಾಸರ ವಾರಪತ್ರಿಕೆ ‘ಬಂಗಲಾರ ಕಥಾ’ ಬಾಸಂತೀದೇವಿಯರ ಹೊಣೆಯಾಯಿತು. ಶ್ರೀಯುತ ಮತ್ತು ಶ್ರೀಮತಿ ದಾಸರಿಬ್ಬರೂ ರವೀಂದ್ರನಾಥರು ಸ್ವದೇಶಿ ಯುಗದ ಕವಿಯಾಗಿದ್ದಂತೆ ಕಾಜಿ ನಜರುಲ್ ಇಸ್ಲಾಮ ಹೊಸ ಯುಗದ ಹೊಸ ಕವಿಯೆಂದು ಅವನನ್ನು ಪ್ರೀತಿಯಿಂದಲೂ ಆದರದಿಂದಲೂ ಕಾಣುತ್ತಿದ್ದರು. ಅವರ ಜತೆಗಿದ್ದ ರಾಜಕೀಯ ಕಾರ್ಯಕರ್ತರೆಲ್ಲರೂ ಅವನನ್ನು ಅದೇ ರೀತಿಯಾಗಿ ಕಾಣುತ್ತಿದ್ದರು. ಯಾವದೇ ಆಂದೋಲನವೇ ಆದರೂ ಅದಕ್ಕೇ ತನ್ನನ್ನು ಅರ್ಪಿಸಿಕೊಂಡ ಕವಿಯೊಬ್ಬನನ್ನು ಕಾಣದೆ ಬಂಗಾಲಿಗಳಿಗೆ ಸಮಾಧಾನವಾಗುವದಿಲ್ಲ. ಆದ್ದರಿಂದ ಬಾಸಂತೀದೇವಿಯ ಗಮನ ನಜರುಲ್‌ನತ್ತ ಹರಿಯಿತು. ಅವನು ಬಂಗಲಾರ ಕಥಾ ಪತ್ರಿಕೆಗೆ ಬರೆಯಬೇಕೆಂದು ಅವನನ್ನು ಕೇಳಿಕೊಂಡರು. ನಜುರುಲ್‌ನಿಗೂ ಇದು ಬೇಕಾದದ್ದೇ ಆಗಿತ್ತು. ದೇಶಬಂಧುವಿನ ಬಗೆಗೆ ಅವನಿಗೆ ಅಪಾರವಾದ ಆದರವಿತ್ತು. ಬಹುಜನ ಬಂಗಾಲಿಗಳಂತೆ ಅವನೂ ಚಿತ್ತರಂಜನರ ಪ್ರಾಮಾಣಿಕತೆ ಮತ್ತು ರಾಷ್ಟ್ರಸೇವೆಗೆ ಅವರು ಮಾಡಿದ ತ್ಯಾಗಗಳಿಂದ ಪ್ರಭಾವಿತನಾಗಿದ್ದನು. ಆದ್ದರಿಂದ ಬಂಗಲಾರ ಕಥಾಕ್ಕೆ ನಜರುಲ್ ತನ್ನದೊಂದು ಅಮರವಾದ ಕವಿತೆಯನ್ನು ಬರೆದು ಕಳಿಸಿದನು. ‘ಭಂಗಾರ ಗಾನ’ (ವಿನಾಶದ ಹಾಡು) ಎಂಬ ಆ ಕವಿತೆಯು ಅಂದು ಪ್ರಜಲಿತವಾಗಿದ್ದ ಹೋರಾಟದ ಭಾವನೆಯನ್ನು ಧ್ವನಿಸುತ್ತದೆ.

**ಕಾರಾರ ಓಇ ಲೌಹಾ ಕಪಾಟ**
**ಭೇಂಗೇ ಫೇಲ ಕರರೇ ಲೊಪಾಟ**
**ರಕ್ತ ಜಮಾತ**
**ಶಿಕಲ ಪುಜಾರ ಪಾಷಾಣ ಬೇದಿ . . .**

(ಒಡೆದುಹಾಕು ಆ ಲೋಹದ ಕದವನು
ಹುಡಿಗೂಡಿಸು ಆ ಕಲ್ಲಕಟ್ಟೆಯನು

ಅದು ನೆನೆದಿದೆ ರಕ್ತದಲಿ
ಸಂಕೋಲೆಯ ಮಾರಿಯ ಪೂಜೆಗೆ ಸುರಿಸಿದ ರಕ್ತದಲಿ.)

ರಾಷ್ಟ್ರೀಯ ಆಂದೋಲನದಲ್ಲಿ ಪ್ರಸಿದ್ಧಿಗೆ ಬಂದ ಹಾಡುಗಳಲ್ಲಿ ಇದು ಮೊದಲನೆಯದಾಗಿತ್ತು. ಸ್ವದೇಶಿ ಯುಗದ ಹಾಡುಗಳಿಗಿಂತ ಇದರ ದನಿ ಎತ್ತರ ವಾಗಿತ್ತು ಕರ್ಕಶವಾಗಿತ್ತು. ಮುಂದಿನ ದಿನಗಳಲ್ಲಿ ನಜರುಲ್ ಇಂತಹ ಇನ್ನೂ ಎಷ್ಟೋ ಹಾಡುಗಳನ್ನು ರಚಿಸಿದನು. ಹೋರಾಟಕ್ಕೆ ಕರೆಕೊಡುವದರಲ್ಲಿ ಇದರ ಧಾಟಿ ಮತ್ತು ಶಬ್ದಗಳು ಹುಸಿಯಿಲ್ಲದೆ ನೇರವಾಗಿ ಎಲ್ಲ ಜನರ ಮನವನ್ನೂ ಮುಟ್ಟುವಂತಿದ್ದವು, ಅದನ್ನು ಹಾಡದಂತೆ ಪ್ರತಿಬಂಧಿಸುವದು ಸಹಜವೇ ಆಗಿತ್ತು. ಆದರೂ ಸ್ವಾತಂತ್ರ್ಯ ಸಂಗ್ರಾಮವು ನಡೆದಿರುವಷ್ಟು ಕಾಲವೂ 1947 ರ ವರೆಗೂ ಸಾವಿರಾರು ವೇದಿಕೆಗಳಿಂದ ಜನರು ಅದನ್ನು ಹಾಡದೆ ಇರಲಿಲ್ಲ. ಬಾಸಂತೀದೇವಿ ತಡಮಾಡದೆ ನಜರುಲ್‌ನನ್ನು ತನ್ನ ಮನೆಗೆ ಕರೆಸಿಕೊಂಡರು. ಅವನಿಗೆ ಅಲ್ಲಿ ದೊರೆತದ್ದು ದಾಸರ ಮನೆಯ ಘನವಾದ ಔತಣದೂಟವೊಂದೇ ಅಲ್ಲ, ಬಾಸಂತೀ ದೇವಿಯು ಪ್ರೀತಿಯಿಂದ ಅವನನ್ನು ಹರಸಿದ್ದನ್ನು ಅವನು ಎಂದಿಗೂ ಮರೆಯಲಿಲ್ಲ. ಅವನ 'ಚಿತ್ತನಾಮಾ' ಎಂಬ ಕೃತಿಯೇ ಇದರ ಸಾಕ್ಷಿ.

ಸನ್ 1921 ರ ಕೊನೆಯ ದಿನಗಳು ಮಿಂಚು ತುಂಬಿದ ಮುಗಿಲಿನಂತಿದ್ದವು. ಜನತೆಯ ಕ್ಷೋಭ ಯಾವ ಗಳಿಗೆಯಲ್ಲಿ ಬಿರುಮಳೆಯಾಗಿ ಹೊಡೆದೀತೆಂಬುದು ತಿಳಿಯುವಂತಿರಲಿಲ್ಲ. ಇಂತಹ ಕಾಲ ನಜರುಲ್ ಸ್ಫೂರ್ತಿಗೆ ಆಯತವಾಗಿತ್ತು. ಅವನ ಕೋಣೆಯಲ್ಲಿಯೇ ಇರುತ್ತಿದ್ದ ಅವನ ಮಿತ್ರ ಮುಜಫ್ಫರ ಅಹಮ್ಮದನು ಹೇಳುವಂತೆ ಡಿಸೆಂಬರ ಕೊನೆಯ ವಾರದ ಒಂದು ರಾತ್ರಿಯಲ್ಲಿ ಬಹಳಹೊತ್ತಿನವರೆಗೆ ನಜರುಲ್ ಕಾಗದ ಪೆನ್ಸಿಲ್ ಹಿಡಿದು ಏನೋ ಬರೆಯುತ್ತಿದ್ದದ್ದು ಕಂಡಿತು. ಅವನೊಂದು ಕವಿತೆ ಯನ್ನು ಬರೆಯುತ್ತಿದ್ದಂತೆ ತೋರುತ್ತಿತ್ತು. ಅದು ಸಾಕಷ್ಟು ದೊಡ್ಡದೂ ಇರಬಹು ದೆಂದು ತೋರುತ್ತಿತ್ತು. ಮರುದಿನ ಬೆಳಗಿನಲ್ಲಿ ಎದ್ದಕೂಡಲೆ ನಜರುಲ್ ಮಾಡಿದ ಮೊದಲ ಕೆಲಸವೆಂದರೆ ಅದನ್ನು ತನ್ನ ಗೆಳೆಯನಿಗೆ ಓದಿ ತೋರಿಸಿದ್ದು ಅದೇ 'ಬಿದ್ರೋಹಿ.'

ಬಾಲೋ ಬೀರ
ಬಾಲೋ ಉನ್ನತ ಮಮ ಶಿರ
(ಹೇಳೋ ವೀರ! ಬಾಗದು ನನ್ನ ತಲೆ ಎಂದು ಹೇಳೋ ವೀರ!)

ಎಂದು ಮೊದಲಾಗಿ ಆ ಚಿರಸ್ಮರಣೀಯವಾದ ಪಂಕ್ತಿಗಳು ನಿರರ್ಗಳವಾಗಿ ಹರಿ ದವು. ಅದೊಂದು ಭವ್ಯವೂ ವಿಶಿಷ್ಟವೂ ಆದ ಕೃತಿಯಾಗಿದ್ದಿತೆಂಬುದು ನಜರುಲ್‌ಗೆ ಖಚಿತ ವಾಗಿತ್ತು. ಅದು ಪ್ರಕಟವಾಗುವದರಲ್ಲಿ ಯಾವ ಅನುಮಾನವೂ ಇರಲಿಲ್ಲ, ಆದರೆ ಅಂದೇ ಆದೇ ಗಳಿಗೆಗೆ ಆಗುವದು ಅವನಿಗೆ ಬೇಕಿತ್ತು. ತನ್ನ ಮಾಧ್ಯಮವೆಂದು ಅವನು ಒಪ್ಪಿದ ಮೊಸ್ಲೆಮ ಭಾರತದಲ್ಲಿ ಅದು ಪ್ರಕಟವಾಗಬೇಕೆಂಬುದು ಅವನ ಇಚ್ಛೆ. ಆದರೆ ಅದು ತಿಂಗಳಿಗೊಮ್ಮೆ ಪ್ರಕಟವಾಗುವದು. ಅದೂ ನಿಯಮಿತವಾಗಿ ಆಗುವದೆಂದು ಹೇಳುವಂತಿರಲಿಲ್ಲ. ಕವಿಗಾದಂತೆಯೇ ಅವನ ಮಿತ್ರರಿಗೂ ಈ ವಿಳಂಬವು ಅಸಹನೀಯ

ವಾಗಿತ್ತು. ಅಂತೂ ಪೊಸ್ಲೆಮ ಭಾರತದಲ್ಲಿ ಮುಂದೆ ಅದು ಪ್ರಕಟವಾದರೂ ಅದನ್ನು ಆ ಕ್ಷಣದಲ್ಲಿ ಪ್ರಕಟಿಸಿದ ಕೀರ್ತಿ ಬರೀಂದ್ರಕುಮಾರ ಘೋಷರ 'ಬಿಜಲೀ' ಪತ್ರಿಕೆಯದಾಯಿತು (22 ಪೌಷ 1328 ಬಂ. ಸಂ. 6 ಜನವರಿ 1922). ಬಂಗಾಲದ ಓದುಗರು ಹುಚ್ಚೆದ್ದು ಕುಣಿದರು. ಓದುಗರ ಬೇಡಿಕೆಯನ್ನು ತಣಿಸುವದಕ್ಕೆ ಆ ಸಂಚಿಕೆಯನ್ನು ಮತ್ತೆ ಮತ್ತೆ ಅಚ್ಚು ಮಾಡಬೇಕಾಯಿತು. ನಜರುಲ್ ತನ್ನ ಗುರೂಜಿ ಎಂದು ಆದರಿಸುತ್ತಿದ್ದ ರವೀಂದ್ರನಾಥರ ಮನೆಗೆ ಆ ಸಂಚಿಕೆಯನ್ನು ತೆಗೆದುಕೊಂಡು ಓಡುತ್ತ ಹೋಗಿ ತನ್ನ ಕೃತಿಯನ್ನು ಓದಿ ತೋರಿಸಿದನಂತೆ. ತನ್ನ ಕೃತಿಗಳನ್ನೋದುವದರಲ್ಲಿ ನಜರುಲ್ ತೋರಿಸುತ್ತಿದ್ದ ಉತ್ಸಾಹ ಎಂದಿನಂತೆ ಅಪ್ರತಿಮವಾಗಿತ್ತು. ಗುರುದೇವ ಅದನ್ನು ಕೇಳಿ ಮೈಮರೆತರು. ಅವರು ನಜರುಲ್‌ನನ್ನು ಮನಸಾರೆ ಆಶೀರ್ವದಿಸಿ ಕೀರ್ತಿಶಾಲಿಯಾಗೆಂದು ಹೇಳಿ ಕಳಿಸಿದರು.

[ಈ ವೃತ್ತಾಂತವು ನಿಜವಾಗಿಯೇ ನಡೆದಿದ್ದರೆ ಅದು ನಡೆಯಿತೆಂದು ಹೇಳಿದ ದಿನಾಂಕ ತಪ್ಪಿರಬೇಕು, ಏಕೆಂದರೆ ಆ ವರ್ಷ ರವೀಂದ್ರರು ಶಾಂತಿನಿಕೇತನಕ್ಕೆ 21 ಪೌಷ ಬ. ಸಂ. 4 ಜನವರಿ—1922 ದಿನವೇ ಹೊರಟುಹೋಗಿದ್ದರು. ಅಲ್ಲಿ ಅವರು ಮುಕ್ತಾಧಾರಾ ಎಂಬ ನಾಟಕದ ರಚನೆಯಲ್ಲಿ ತೊಡಗಿದ್ದರು. ನಜರುಲ್ ಅವರನ್ನು ಭೆಟ್ಟಿಯಾಗಿ ಅವರ ಆಶೀರ್ವಾದವನ್ನು ಪಡೆದನೆಂಬುದರಲ್ಲಿ ಸಂಶಯವಿಲ್ಲವಾದರೂ ಮೇಲೆ ಹೇಳಿದ ದಿನ ಮೇಲೆ ಹೇಳಿದ ಸಂದರ್ಭದಲ್ಲಿ ಆಗಿರಲಾರದು. (ಪ್ರಭಾತ ಕುಮಾರ ಮುಖೋಪಾಧ್ಯಾಯರ ರವೀಂದ್ರ ಜೀವನೀ ಭಾಗ 3 ಪುಟ 91. ಬ. ಸಂ. 1359 ಮತ್ತು ಮುಜಪ್ಫರ ಅಹಮ್ಮದರ ಸ್ಮೃತಿಕಥಾ ಪುಟ 238.)]

'ಬಿದ್ರೋಹಿ' ಪ್ರಕಟವಾದ ಕೂಡಲೇ ನಜರುಲ್ ಹೆಸರು ಒಮ್ಮೆಲೇ ಎಲ್ಲೆಡೆಯಲ್ಲಿಯೂ ಕೇಳಿ ಬರುವಂತಾಯಿತೆನ್ನುವದರಲ್ಲಿ ಸಂದೇಹವಿಲ್ಲ. ಅದೊಂದು ಘನವಾದ ಕೃತಿಯೇ ಅಹುದು. ಆದರೆ ಅದರಲ್ಲಿ ದೋಷಗಳೇ ಇಲ್ಲವೆನ್ನುವಂತಿಲ್ಲ, ಅದನ್ನು ಮೆಚ್ಚಿಕೊಂಡ ಓದುಗರಿಗೂ ಅವು ಕಾಣದೇ ಇರಲಿಲ್ಲ. ನಜರುಲ್ ಸ್ವತಃ ಅವು ಇಲ್ಲವೆಂದು ಹೇಳಲಿಲ್ಲ. ಆದರೆ ಅಂದು ಆ ದೋಷಗಳು ಯಾವ ಲೆಕ್ಕಕ್ಕೂ ಬರಲಿಲ್ಲ. ಬಂಗಾಲದ ರಾಷ್ಟ್ರೀಯ ಮತ್ತು ಸಾಹಿತ್ಯಿಕ ಜೀವನದಲ್ಲಿ ಅದೊಂದು ಮಹತ್ವದ ಘಟನೆಯಾಗಿತ್ತು. ಆ ಜೀವನದಲ್ಲಿ ವಿದ್ರೋಹವು ಸರ್ವವ್ಯಾಪಿಯಾಗಿತ್ತು. ಅದಕ್ಕೆ ದನಿಯೊಡೆಯುವದನ್ನೇ ಎಲ್ಲರೂ ಎದುರು ನೋಡುತ್ತಿದ್ದರು. ಆ ದನಿ ಎತ್ತುವದಕ್ಕೆ ನಜರುಲ್‌ನಂತಹ ಇನ್ನೊಬ್ಬನಿರಲಿಲ್ಲ. ಆ ಗಳಿಗೆಯಲ್ಲಿ ಅವನ ಚಿತ್ತವೃತ್ತಿಯೇ ಹಾಗಿತ್ತು. ವಿದ್ರೋಹ; ಬಂಧನವೆಂದರೆ ಸಹಿಸಲಾಗದು; ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಚಡಪಡಿಕೆ; ವ್ಯಕ್ತಿ ಜೀವನದಲ್ಲೂ ಯಾವ ಸಂಕೋಚಗಳೂ ಬೇಡ; ಎಲ್ಲವೂ ನಿರರ್ಗಳವಾಗಿ ಹರಿಯಬೇಕು; ಬೀಸಬೇಕು; ಅಭಿವ್ಯಕ್ತಿಯು ತೇಜಃಪುಂಜವಾಗಿ ಸುಂದರವಾಗಿ ಬೆಳೆಯಬೇಕು; ಎಂಬುದೆಲ್ಲ ಅವನ ಆಕಾಂಕ್ಷೆಯಾಗಿತ್ತು. ವ್ಯಕ್ತಿಯ ಸ್ವಾತಂತ್ರ್ಯ ಮತ್ತು ಜನಾಂಗದ ಸ್ವಾತಂತ್ರ್ಯ ಇವೆರಡರ ಸಮನ್ವಯಸ್ಥಾನವು ಅವನಿಗೆ ಮಸುಕಾಗಿ ಗೋಚರಿಸಿತ್ತು—ಮಾನವರ ಜನ್ಮದತ್ತವಾದ ಹಕ್ಕುಗಳು. ಆ ಕಲ್ಪನೆಯ ಬೌದ್ಧಿಕ ಆಯಾಮಗಳು ಅವನಿಗೆ ಸ್ಪಷ್ಟವಾಗಿರಲಿಲ್ಲ. ಅಂದಿನ ಜನ

ಸಾಮಾನ್ಯರಿಗೂ ಅಷ್ಟೇ. ಬೌದ್ಧಿಕ ಗೊಂದಲವು ಸಾಮಾನ್ಯವಾಗಿದ್ದರೂ ಅದರ ಹಿಂದಿದ್ದ ಧ್ಯೇಯವು ನಿರ್ದಿಷ್ಟವಾಗಿತ್ತು; ಭಾವನಾತ್ಮಕ ಪ್ರಚೋದನೆಯು ಪ್ರಾಮಾಣಿಕವಾಗಿತ್ತು. ಹೇಗಾದರೂ ಸರಿ, ಸ್ವರಾಜ್ಯವು ಎಲ್ಲರಿಗೂ ಬೇಕಾಗಿತ್ತು. ಆದ್ದರಿಂದಲೇ 'ಬಿದ್ರೋಹಿ' ಅಸ್ಪಷ್ಟ ವಿಚಾರಗಳಿಂದ ತುಂಬಿದ್ದರೂ ಅವರಿಗೆ ಬೇಕಾಗಿದ್ದ ಕವಿತೆಯಾಗಿತ್ತು. ನಜರುಲ್ ಅವರು ಬೇಡಿದ ಕವಿಯಾಗಿದ್ದನು. ಏನಿದ್ದರೂ ಅದು ನಜರುಲ್‌ನ ಅಭಿವ್ಯಕ್ತಿಯ ದಾರಿಯಲ್ಲಿದ್ದ ಸಂಕೋಚಗಳನ್ನು ದೂರಮಾಡಿತು.

ಜನಗಳಿಗೇನೋ ಬೇಕಾಗಿದ್ದ ಕವಿ ಸಿಕ್ಕಿದನು. ಆದರೆ ಕವಿಯು ತನಗೆ ಬೇಕಾಗಿದ್ದ ಗೆಳೆಯನೊಬ್ಬನನ್ನು ಕಳೆದುಕೊಳ್ಳಬೇಕಾಯಿತು. ಅದು ನಡೆದದ್ದು ಹೀಗೆ: 'ಬಿದ್ರೋಹಿ'ಯನ್ನು ಓದಿ ಮೋಹಿತಲಾಲ ಮುಜುಂದಾರನು ಮುನಿದನು. ಅದೊಂದು ಕೃತಿಚೌರ್ಯವೆಂದು ಅವನು ಆಪಾದಿಸಿದನು. ತಾನು ಬರೆದು ತನ್ನ ಕಿರಿಯ ಗೆಳೆಯನಾದ ನಜರುಲ್‌ನಿಗೆ ಓದಿ ತೋರಿಸಿದ ತನ್ನ ಗದ್ಯಕೃತಿ 'ಆಮಿ' (ನಾನು) ಎಂಬದನ್ನೇ ಆಧರಿಸಿ ನಜರುಲ್ ತನ್ನ ಕವಿತೆಯನ್ನು ಬರೆದಿದ್ದನೆಂಬದು ಅವನ ಅಭಿಪ್ರಾಯವಾಗಿತ್ತು. ಇದೆಲ್ಲವೂ ನಿಜವೇ ಇರಬಹುದು. ಆದರೆ ಅವೆರಡೂ ಕೃತಿಗಳು ವಸ್ತುರೀತಿಗಳಲ್ಲಿ ಬೇರೆಬೇರೆಯಾಗಿದ್ದವು. ಮೋಹಿತಲಾಲ ತನ್ನ ಕೃತಿಯನ್ನು ನಜರುಲ್‌ನಿಗೆ ಓದಿ ತೋರಿಸಿದ್ದಿರಬಹುದು. ಅದರಿಂದ ನಜರುಲ್ ಪ್ರಭಾವಿತನಾಗಿರಲೂ ಬಹುದು. ಆದರೆ ಅವೆರಡೂ ಕೃತಿಗಳಲ್ಲಿ ಒಂದು ಗದ್ಯ ಇನ್ನೊಂದು ಪದ್ಯ ಎನ್ನುವ ವ್ಯತ್ಯಾಸವೊಂದಲ್ಲದೆ ಇನ್ನೂ ಅನೇಕ ವ್ಯತ್ಯಾಸಗಳಿದ್ದವು. ಮೋಹಿತಲಾಲನ 'ಆಮಿ' ಎಂಬ ಕೃತಿಯ ಮೂಲವಸ್ತುವು ಅದ್ವೈತವೇದಾಂತದ 'ಅಹಮ್' ಎಂಬ ಕಲ್ಪನೆಯಾಗಿತ್ತು. ನಜರುಲ್‌ನ ಕೃತಿಯ ಮೂಲವಸ್ತುವು ಬಂಧನವನ್ನು ಸಹಿಸದೆ ಸಿಡಿದೆದ್ದ ಮನುಷ್ಯನ ವ್ಯಕ್ತಿತ್ವವಾಗಿತ್ತು. ಪ್ರಪಂಚದಲ್ಲಿಯ ಪ್ರೀತಿ ಚೆಲುವು ದಿಟವಾದುದನ್ನೆಲ್ಲ ಕಾಣುವದಕ್ಕೆ ಅಡ್ಡಿಯಾಗಿದ್ದ ಬಂಧನಗಳ ವಿರುದ್ಧವಾಗಿ ಬಂಡೆದ್ದ ವ್ಯಕ್ತಿತ್ವ ಇದಾಗಿತ್ತು. ಕವಿಯು ತನ್ನಲ್ಲಿಯೇ ಕಂಡ ಸರ್ವಾಂತರ್ಯಾಮಿಯ ಕಲ್ಪನೆ ಮೋಹಿತಲಾಲನದಾಗಿತ್ತು. ಹಟದಿಂದ ತನ್ನ ದಾರಿಯನ್ನೇ ಕಂಡುಕೊಳ್ಳಬೇಕೆನ್ನುವ ವ್ಯಕ್ತಿಯ ನಜರುಲ್ ಕಲ್ಪನೆ ಹೆಚ್ಚು ಬಹಿರ್ಮುಖವಾಗಿತ್ತು.

[ಮೋಹಿತಲಾಲ ಮುಜುಂದಾರನ ಸತ್ಯಸಂಧತೆಯ ಬಗ್ಗೆ ಲೇಖಕನಿಗೆ ಸ್ವಲ್ಪವೂ ಸಂದೇಹವಿಲ್ಲ. ಅವನ 'ಆಮಿ' ಎಂಬ ಕೃತಿಯ ಮೂಲ ಪ್ರೇರಣೆಯು ಕ್ಷೇತ್ರಮೋಹನ ಬಂದ್ಯೋಪಾಧ್ಯಾಯರ 'ಅಭಯೇರಕಥಾ' ಅಥವಾ 'ಠಾಕುರನೀರ ಕಥಾ' ಎಂಬವುಗಳಿಂದ ಬಂದಿತೆಂದು ಮೋಹಿತಲಾಲನೇ ಲೇಖಕನಿಗೆ ಹೇಳಿದ್ದಾನೆ. ಕ್ಷೇತ್ರಮೋಹನರು ಕಲಕತ್ತೆಯ ರಿಪನ್ ಕಾಲೇಜಿನಲ್ಲಿ ಪ್ರೊಫೆಸರ ಆಗಿದ್ದರು. ದುರ್ದೈವದಿಂದ ಈಗ ಮರೆತು ಹೋಗಿರುವ ಈ ಎರಡು ಕೃತಿಗಳು ಓದಲೇ ಬೇಕಾದಂಥವು. ಇವುಗಳಲ್ಲಿಯ ಅನೇಕ ಭಾಗಗಳನ್ನು ಮೋಹಿತಲಾಲ ಆಗಾಗ ಓದಿ ಹೇಳುತ್ತಿದ್ದನು. ಅವುಗಳನ್ನು ನೆನೆದರೆ 'ಆಮಿ' ಕೃತಿಯು ಅದ್ವೈತವೇದಾಂತದ 'ಅಹಮ್' ಕುರಿತದ್ದೇ ಎಂಬುದರಲ್ಲಿ ಸಂಶಯವುಳಿಯಲಾರದು. 'ಆಮಿ' ಮೊದಲು ಮನಶೀ ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಯಿತು.]

ಈ ವೇದಾಂತ ಕಲ್ಪಿತ 'ಆಮಿ' ತತ್ವವು ನಜರುಲ್ ಒಳಮನಸಿಗೆ ಸ್ಪಷ್ಟವಾಗಿ ಗೋಚರಿಸದೆ ಇದ್ದುದರಿಂದಲೇ ಇರಬಹುದು 'ಬಿದ್ರೋಹಿ'ಯಲ್ಲಿ ಕಂಡುಬರುವ ಅಸ್ಪಷ್ಟತೆ ಮತ್ತು ಕೆಲವು ಅಸಾಂಗತ್ಯಗಳು ಉಂಟಾಗಿರುವುದು. ಆದರೆ ಮೋಹಿತಲಾಲನ ನೊಂದ ಮನಸು ಮತ್ತೆ ಒಲಿಯಲಿಲ್ಲ. ಅದಕ್ಕೆ ಇನ್ನೂ ಆಳವಾದ ಕಾರಣಗಳಿದ್ದವು. ಅವರಿಬ್ಬರ ವ್ಯಕ್ತಿತ್ವಗಳಲ್ಲಿ ಘರ್ಷಣೆ ಅನಿವಾರ್ಯವಾಗಿತ್ತು ಎಂದು ಮುಜಪ್ಫರ ಹೇಳುವದೇ ಸರಿ. ಮೋಹಿತಲಾಲನು ತನ್ನ ಸ್ವಯಂಪ್ರತಿಷ್ಠೆಯಿಂದ ನಜರುಲ್‌ನನ್ನು ತನ್ನ ಆಶ್ರಯದಲ್ಲಿ ಬೆಳೆದವನೆಂಬಂತೆ ನೋಡುತ್ತಿದ್ದನು. ಆದರೆ ಇಂತಹ ಆಶ್ರಿತಭಾವ ನಜರುಲ್‌ಗುಣಕ್ಕೆ ಒಪ್ಪುವದು ಸಾಧ್ಯವೇ ಇರಲಿಲ್ಲ. ಎಲ್ಲರೊಡನೆಯೂ ನಿಸ್ಸಂಕೋಚವಾದ ಮೈತ್ರಿಯಿಂದ ವರ್ತಿಸುವದೇ ಸರಿ ಎಂಬ ನಜರುಲ್‌ನ ಹಟವು ಅವನನ್ನು ಮೊಹಿತಲಾಲನಿಂದ ದೂರಮಾಡಿತು. ಬೇರೆ ಬೇರೆ ವಿಧದ ಎರಡು ವ್ಯಕ್ತಿಗಳಲ್ಲಿ ಅನಿವಾರ್ಯವಾದ ಅಸಂಗತಿ ಅದಾಗಿತ್ತು.

ಅಂತೂ ಮುಂದಿನ ಎರಡು ವರ್ಷಗಳಲ್ಲಿ (1924) ನಜರುಲ್ ಒಂದು ಪ್ರತಿಸ್ಪರ್ಧಿ ಗುಂಪಿನ ನಾಯಕನೆಂದು ಹೇಗೆ (ತಪ್ಪಾಗಿಯೇ ಆದರೂ) ಭಾವಿಸುವಂತಾಯಿತೆಂಬದನ್ನು ಮುಂದೆ ಹೇಳುವೆವು. ನಜರುಲ್ ಜನಪ್ರಿಯತೆಯು ಪರಾಕಾಷ್ಠೆಯಲ್ಲಿದ್ದನು. ಅಂದು ಬಂಗಾಲದ ಸುಶಿಕ್ಷಿತ ವರ್ಗಗಳಲ್ಲಿ ಪ್ರಚಲಿತವಿದ್ದ ನೈತಿಕ ಮತ್ತು ಸಾಹಿತ್ಯಿಕ ನೆಲೆಬೆಲೆಗಳ ವಿರುದ್ಧವಾಗಿ ಒಂದು ಅಪ್ರಬುದ್ಧ ಮನೋಭಾವದ ಬಂಡಾಯವನ್ನು 'ಕಲ್ಲೋಳ' ಗುಂಪಿನ ಸಾಹಿತಿಗಳು ಹೂಡಿದರು. ಅದು ಹೇಗೋ ನಜರುಲ್ ಈ ಗುಂಪಿನ ನಾಯಕನೆಂದು ತಪ್ಪಾದ ಭಾವನೆಯುಂಟಾಯಿತು. ಇದಕ್ಕೆ ಪ್ರತಿಯಾಗಿ 'ಶನಿಬಾರೇರ ಚಿಠ್ಠಿ' ಪರಿವಾರದ 'ಕರಿಯಂಗಿಯ' ಸಾಹಿತಿಗಳ ಗುಂಪೊಂದು ದೊಣ್ಣೆಯನ್ನೆತ್ತಿತು. ಮೋಹಿತಲಾಲ ಈ ಗುಂಪಿನ ಸಿದ್ಧಾಂತ ಪ್ರತಿಪಾದಕನಾಗಿದ್ದನು. 'ಬಿದ್ರೋಹಿ' ಕವನದ ಅಣಕವೊಂದನ್ನು ಇವನೇ ಬರೆದವನೆಂದು ತಪ್ಪಾಗಿ ಭಾವಿಸಲಾಯಿತು. ನಿಜವಾಗಿ ಅದನ್ನು ಬರೆದವನು ಸಜನೀಕಾಂತ ದಾಸ. ಕೆರಳಿದ ನಜರುಲ್ ಇದನ್ನು ನಿಂದಿಸಿ 'ಸರ್ವನಾಶೇರ ಘಂಟಾ' ಎಂಬ ಕವಿತೆಯನ್ನು ಬರೆದನು. ಮೋಹಿತಲಾಲ ನಜರುಲ್‌ನನ್ನು ಬಹಿರಂಗವಾಗಿಯೇ ಎದುರಿಸಿ ಅದಕ್ಕೆ ಉತ್ತರವಾಗಿ 'ದ್ರೋಣಗುರು' ಎಂಬ ಕವನದಲ್ಲಿ ಬಾಯಿಗೆ ಬಂದಂತೆ ಶಪಿಸಿದನು. ವಾಸ್ತವವಾಗಿ ನಜರುಲ್ ಬರೆದ ಕವಿತೆಯಲ್ಲಿ ಕೋಪಕ್ಕಿಂತ ವಿಷಾದವೇ ಹೆಚ್ಚಾಗಿದ್ದಿತು. ಮೋಹಿತಲಾಲ ಬರೆದಂತಹ ಅಸಹ್ಯವಾದ ಖಾರವಾದ ಬೈಗುಳು ಅದರಲ್ಲಿರಲಿಲ್ಲ. ಆ ಹಿರಿಯ ಕವಿಯಂತೆ ನಜರುಲ್ ತನ್ನ ಮನಸು ಕಹಿಮಾಡಿಕೊಳ್ಳದೆ ಇದ್ದದ್ದು ಒಳ್ಳೆಯದೇ ಆಯಿತು. ನಜರುಲ್ ಮಟ್ಟಿಗೆ 'ಆಮಿ—ಬಿದ್ರೋಹಿ' ಜಗಳವು ಅಲ್ಲಿಗೆ ಮುಗಿಯಿತು. ಒಂದು ರೀತಿಯಾಗಿ ಮೋಹಿತಲಾಲನ ವಾದವನ್ನು ಓದುಗರು ಮೊದಲೇ ಕಡೆಗಣಿಸಿದ್ದರು. ಬಂಗಾಲದ ಸಾಹಿತಿಗಳು ಅದನ್ನು ಒಪ್ಪಿರಲೇ ಇಲ್ಲ. ಆದ್ದರಿಂದ ಮುಂದೆ 10 ಫಾಲ್ಗುಣ 1329 ಬ. ಸಂ. (24 ಫೆಬ್ರುವರಿ 1923) ರಂದು ರವೀಂದ್ರನಾಥರು ತಮ್ಮ ಗೀತನಾಟ್ಯ 'ಬಸಂತ'ವನ್ನು ನಜರುಲ್‌ಗೆ ಅರ್ಪಣೆ

ಮಾಡಿದ್ದು ಬಂಗಾಲೀ ವಾಚಕರಿಗೆ ಸಮಾಧಾನವುಂಟುಮಾಡಿತು. ಸ್ವತಃ ಆ ಕವಿಯೂ ಮೋಹಿತಲಾಲನ ತಕರಾರನ್ನು ಗಣನೆಗೆ ತಂದಿರಲಿಲ್ಲವೆಂದು ತೋರಿತು.

ಬಿದ್ರೋಹಿ ಕವನವು ಪ್ರಕಟವಾದಂದಿನಿಂದ ನಜರುಲ್‌ಗೆ 'ಬಿದ್ರೋಹಿಕವಿ' ಎಂಬದೇ ಹೆಸರಾಯಿತು. ಇಪ್ಪತ್ತರ ವರ್ಷಗಳಲ್ಲಿ ನಡೆಯುತ್ತಿದ್ದ ನಜರುಲ್ ಸಾಹಿತ್ಯ ಜೀವನದ ಮೊದಲನೆಯ ಹಂತದಲ್ಲಿ ಈ ಹೆಸರು ಅವನ ಮನೋಭಾವಕ್ಕೆ ಸರಿಯಾಗಿತ್ತು. ಆದರೆ ಇದೊಂದೇ ಅಲ್ಲದೆ ಅವನ ಸಾಹಿತ್ಯದಲ್ಲಿ ಬೇರೆ ಹಂತಗಳಿದ್ದವು. ಅವನ ಒಳ ಹೊರ ಜೀವನದಲ್ಲಿ ಅಷ್ಟೇ ಎದ್ದು ಕಾಣುವ ಬೇರೆ ವಿಚಾರಗಳೂ ಇದ್ದವು. ಬಂಡು ಗಾರನ ಆತ್ಮಸಮರ್ಥನೆಗಿಂತ ಬೇರೆಯಾದ ಅಭಿವ್ಯಕ್ತಿಯ ರೀತಿಗಳೂ ಅವನ ಕೃತಿಗಳಲ್ಲಿದ್ದವು. ಇವೆಲ್ಲವನ್ನೂ ಈ ಮೊದಲ ಹಂತದಲ್ಲಿಯೇ ಕಾಣಬಹುದಿತ್ತು. ಆ ವ್ಯಕ್ತಿಯ ಮತ್ತು ಆ ಕಾಲದ ಮನೋಧರ್ಮ ಈ ಕವಿತೆಯಲ್ಲಿ ಎದ್ದು ಕಾಣುವಂತಿತ್ತು. ಅದು ಅನಿರೀಕ್ಷಿತವಾಗಿ ಒದರಿಕೊಂಡದ್ದಲ್ಲ. ನಜರುಲ್ ಮೊದಲಿನಿಂದಲೂ ಹೋರಾಟಕ್ಕೆ ಸನ್ನದ್ಧನಾಗಿದ್ದ ಕವಿ. ಆ ಕಾಲದ ಅವನ ಕವಿತೆಗಳಲ್ಲಿ ಈ ಮನೋ ಧರ್ಮವೇ ಮುಖ್ಯವಾಗಿತ್ತು. ಇಜಿಪ್ತಿನ ಝಗಲುಲ್ ಪಾಶಾ ಮತ್ತು ತುರ್ಕಸ್ತಾನದ ಕಮಾಲ ಪಾಶಾರವರನ್ನು ಹೊಗಳುವ ಶಕ್ತಿಯುತವಾದ ಕವನಗಳು ಹೊರಬಂದವು. (ಕಮಾಲ ಪಾಶಾನ ಪ್ರತಿಸ್ಪರ್ಧಿಯಾಗಿದ್ದ ಅನವರ ಪಾಶಾನನ್ನು ಅವನ ಸಂಗಾತಿ ಯೆಂದು ನಜರುಲ್ ತಿಳಿದದ್ದು ವಿಚಿತ್ರವಾಗಿತ್ತು!) ಭಾರತದ ರಾಷ್ಟ್ರೀಯ ಚಳುವಳಿಯೂ ಅವನ ಎಷ್ಟೋ ಕವನಗಳಿಗೆ ವಿಷಯವಾಗಿತ್ತು; ಅಲೀ ಬಂಧುಗಳ ಕಾರಾವಾಸ, ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಕಾಂಗ್ರೆಸ ಆಂದೋಲನ ಇತ್ಯಾದಿ. ಬಹುಜನ ಬಂಗಾಲಿಗಳಂತೆ ನಜರುಲ್‌ನಾದರೂ ಮಹಾತ್ಮರ ಅನನ್ಯ ಭಕ್ತನಾಗಿರಲಿಲ್ಲ. ಅಹಿಂಸೆ ಸತ್ಯಾಗ್ರಹಗಳು ಉನ್ನತವಾದ ಧ್ಯೇಯಗಳೇ ಆದರೂ ಅಷ್ಟಾಗಿ ವ್ಯಾವಹಾರಿಕವಾದು ವಲ್ಲವೆಂಬುದು ಅವರ ಭಾವನೆಯಾಗಿತ್ತು. ಆರಂಭದಲ್ಲಿ ಮಾತ್ರ ಅವನು ಗಾಂಧೀಜಿ ಯವರ ಮುಂದಾಳುತನವನ್ನು ಮನಸಾರೆ ಒಪ್ಪಿದ್ದನು. ಏಕೆಂದರೆ ರಾಷ್ಟ್ರದ ಸ್ವಾತಂತ್ರ್ಯ ಜನಜಾಗೃತಿ ಮತ್ತು ನೇರವಾದ ಹೋರಾಟ ಇವು ಅಂದಿನ ಮುಖ್ಯ ಕಾರ್ಯಗಳಾಗಿ ದ್ದವು. ಕೊಮಿಲ್ಲದಲ್ಲಿ ಸನ್ 1921 ರಲ್ಲಿ ಅವನು ಬರೆದ ಕವಿತೆಗಳು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧೀಜಿಯವರ ಪ್ರವೇಶವನ್ನು ಉತ್ಸಾಹದಿಂದ ಸ್ವಾಗತಿಸಿದವು:

ಏ ಕೋನ ಪಾಗಲ ಪಥಿಕ ಛೂಟೇ ಏಲೋ ಬಂದಿನಿ
ಮಾರ ಆಂಗಿನೇ?
ತ್ರಿಶಕೋಟಿ ಭಾಯಿ ಮರಣಹರಣ ಗಾನಗೇಯೇ
ತಾರ ಸಂಗೇ ಜಾಯ

[ಈ ಮರುಳ ಪಥಿಕನು ಯಾರು ತಾಯೇ ಓಡಿ ಬಂದನು ನಿನ್ನ —
ಕಾರಾಗೃಹದ ಅಂಗಳಕೇ
ಮರಣವನು ಧಿಕ್ಕರಿಸಿ ಹಾಡುವರವನ ಜತೆಯಲಿ ಈ
ಮೂವತ್ತು ಕೋಟಿ ಜನ]

ಹೀಗೆ ತೆರೆತೆರೆಯಾಗಿ ಹರಿಯಿತು ನಜರುಲ್‌ನದೇ ವಿಶಿಷ್ಟವಾದ ಕಂಠತುಂಬಿ ನಿರರ್ಗಳವಾಗಿ ಹರಿಯುವ ಶಬ್ದವಾಹಿನಿ. ಇಂತಹದೇ ಒಂದು ಕವಿತೆಯನ್ನು ಅವನು ರಾಟಿಯನ್ನೂ ಕುರಿತು ಬರೆದನು. ಆದರೆ ಅವನ ಮಟ್ಟಿಗೆ ರಾಟಿಗೆ ರಾಷ್ಟ್ರೀಯ ಹೋರಾಟದ ಸಂಕೇತವೆಂಬುದಕ್ಕಿಂತ ಹೆಚ್ಚಿನ ಮಹತ್ವವೇನೂ ಇರಲಿಲ್ಲ. ಗಾಂಧೀಜಿಯವರನ್ನು ಕುರಿತು ಬರೆದ ಈ ಮಾದರಿಯ ಕವಿತೆಗಳಲ್ಲದೆ ಇನ್ನೂ ಬೇರೆ ತರಹದ ಹತ್ತಾರು ಕವಿತೆಗಳನ್ನು ಬರೆದನು. ಅವನ ಆಳವಾದ ದೇಶಭಕ್ತಿ, ಬಿಡುಗಡೆಯ ಹಂಬಲ, ರಾಷ್ಟ್ರೀಯ ಹೋರಾಟದಲ್ಲಿ ಆಸಕ್ತಿ, ಮುನ್ನುಗ್ಗುತ್ತಿದ್ದ ಅಸಹಕಾರ ಚಳುವಳಿ ಮುಂತಾದುವೆಲ್ಲ ಆ ಕವಿತೆಗಳಿಗೆ ವಸ್ತುಗಳಾಗಿವೆ. ಅಂದಿನ ಆಂದೋಲನದಲ್ಲಿ ಅವನು ಸಮರಸವಾಗಿದ್ದುದು ಅವನ ಕವಿತೆಗಳಲ್ಲಿ ಮಾತ್ರವಲ್ಲದೆ ಆ ಕಾಲದ ಅವನ ಎಲ್ಲ ಬರೆವಣಿಗೆಯಲ್ಲೂ ಎದ್ದು ಕಾಣುತ್ತದೆ.

ನಜರುಲ್ ಬರೆಯುತ್ತಿದ್ದದ್ದು ಇದೊಂದೇ ತರಹದ ಕವಿತೆಯಾಗಿರಲಿಲ್ಲ. ಕಣ್ಣು ಕಿವಿ ಬುದ್ಧಿ ಮನಸುಗಳಿಂದ ಬರುವ ಎಲ್ಲ ಪ್ರಚೋದನೆಗಳಿಗೂ ಅವನ ಹೃದಯ ತೆರೆದಿತ್ತು, ಅವನ ಚೈತನ್ಯ ಉಕ್ಕಿ ಹರಿಯುತ್ತಿತ್ತು. ಅವನ ಬರೆವಣಿಗೆಯ ಯಾವ ಹಂತದಲ್ಲೂ ಅವನಿಗೆ ವೈವಿಧ್ಯದ ಕೊರತೆ ಇರಲಿಲ್ಲ. ಹಾಗೆ ಸನ್ 1922 ರಲ್ಲಿ ಅವನು 'ಭಂಗಾರ ಗಾನ'ದಂತಹ ಕೃತಿಗಳನ್ನಲ್ಲದೆ ಸ್ವಂತವಾದ ಭಾವನೆಗಳನ್ನೊಳಗೊಂಡ ಅನೇಕ ಸುಂದರವಾದ ಹಾಡುಗಳನ್ನೂ ಕವಿತೆಗಳನ್ನೂ ಬರೆದನೆಂದು ತೋರುತ್ತದೆ. ಅವುಗಳ ಆಧಾರದಲ್ಲಿ ಗಂಡುಮನಸಿನ ಗಡಸೂ ಅಭಿವ್ಯಕ್ತಿಯಲ್ಲಿ ಕೋಮಲೆಯನಯವೂ ಮನಸಳೆಯುತ್ತವೆ. ಇವುಗಳನ್ನೇ ಒಟ್ಟುಗೂಡಿಸಿ 'ದೋಲೋನ ಚಂಪಾ' (1923) 'ಛಾಯಾನಟ' (1924) ಮತ್ತು 'ಪೂಬೇರ ಹವಾ' ಎಂಬ ಪ್ರೇಮಗೀತೆಗಳ ಸಂಕಲನಗಳಲ್ಲಿ ಪ್ರಕಟಿಸಲಾಯಿತು. ಇವೆಲ್ಲ ಬರುವ ಕಾಲ ಇನ್ನೂ ದೂರವಿತ್ತು. ಸನ್ 1921ರ ವರೆಗೆ ನಜರುಲ್ ಪ್ರಕಟಿಸಿದ ಯಾವ ಸಂಕಲನವೂ ಇರಲಿಲ್ಲ. ಸನ್ 1922 ರಲ್ಲಿ ಅವನ ಮೊದಲ ಪ್ರಕಟನೆಗಳು ಇನ್ನೂ ಅಚ್ಚಿನಲ್ಲಿದ್ದವು. ಬಹುಕಾಲ ಮುದ್ರಣಾಲಯದಲ್ಲಿಯೇ ಉಳಿದಿದ್ದ 'ಬ್ಯಥಾರ ದಾನ' ಎಂಬ ಸಣ್ಣ ಕತೆಗಳ ಸಂಕಲನವು ಮಾರ್ಚ್ 1922 ರಲ್ಲಿ ಹೊರಬಂದಿತು. ನವಯುಗ ಪತ್ರಿಕೆಯಲ್ಲಿ ಅವನು ಬರೆದ ಲೇಖನಗಳ ಸಂಗ್ರಹವೊಂದು 'ಯುಗವಾಣಿ' ಎಂಬ ಹೆಸರಿನಿಂದ ಅಕ್ಟೋಬರ 1922 ರಲ್ಲಿ ಪ್ರಕಟವಾಯಿತು (ಇದು ಅಲ್ಪ ಕಾಲದಲ್ಲಿಯೇ ನಿಷೇಧಿಸಲ್ಪಟ್ಟಿತೆಂದು ತೋರುತ್ತದೆ?). ಕೊನೆಯದಾಗಿ ಅದೇ ತಿಂಗಳಲ್ಲಿ 'ಅಗ್ನಿವೀಣಾ' ಎಂಬ ಜಾಜ್ವಲ್ಯಮಾನವಾದ ಕವಿತಾ ಸಂಕಲನವು ಹೊರಬಂದಿತು. ಅದರ ಸಹಸ್ರಾರು ಪ್ರತಿಗಳು ಇಂದಿಗೂ ಮಾರಾಟವಾಗುತ್ತಿದ್ದರೂ ಅದರಿಂದ ಕವಿಗೆ ಮಾತ್ರ ಚಿಕ್ಕಾಸಿನ ಲಾಭವೂ ಇಲ್ಲ. ಈ ಸಂಕಲನದ ಇನ್ನೂ ಕೆಲವು ವೈಶಿಷ್ಟ್ಯಗಳು ಸ್ಮರಣೀಯವಾಗಿದ್ದವು.

'ಅಗ್ನಿವೀಣಾ' ಸಂಕಲನವು 'ಅಗ್ನಿಯುಗ'ದ ಪುರೋಗಾಮಿ ಕ್ರಾಂತಿಕಾರಿಗಳಲ್ಲೊಬ್ಬರಾದ ಬರೀಂದ್ರಕುಮಾರ ಘೋಷನಿಗೆ ಅರ್ಪಿತವಾಗಿತ್ತು. (ಬಂಗಾಲದ ಕ್ರಾಂತಿಕಾರಿ ಚಟುವಟಿಕೆಗಳ ಮೊದಲ ಅವಧಿ 1900—1908 ಅಗ್ನಿಯುಗವೆಂದು

ಹೆಸರಾಗಿತ್ತು). ಗುರು ಅವನೀಂದ್ರನಾಥ ಟಾಗೋರರು ತಾವಾಗಿ ಅದಕ್ಕೆಂದೇ ಬರೆದು ಕೊಟ್ಟ ಚಿತ್ರವು ಅದರ ಹೊದಿಕೆಯನ್ನಲಂಕರಿಸಿತ್ತು. ಇದು ಯಾವ ಲೇಖಕನಿಗಾದರೂ ಅಭಿಮಾನಾಸ್ಪದವಾಗಿತ್ತು. ನಜರುಲ್ ಸಾಮಾನ್ಯರ ಹೃದಯದಲ್ಲಿ ಪ್ರವೇಶ ಪಡೆದಂತೆಯೇ ಟಾಗೋರ ಮನೆತನದವರ ಹೃದಯದಲ್ಲಿಯೂ ಪಡೆದಿದ್ದ ನೆಂಬುದು ಸ್ಪಷ್ಟವಾಗಿತ್ತು. ಈ ಸಂಕಲನದ ಜನಪ್ರಿಯತೆ ಅಪೂರ್ವವಾಗಿದ್ದು ಮೂರು ನಾಲ್ಕು ತಿಂಗಳುಗಳಲ್ಲಿಯೇ ಎರಡನೆಯ ಆವೃತ್ತಿಯನ್ನು ಹೊರತರಬೇಕಾಯಿತು (ಫೆ. 1923). ನಜರುಲ್ ದೈವ ಕಣ್‌ದೆರೆದಿತ್ತು. ಅವನ ಸ್ವಭಾವಕ್ಕೆ ಸಹಜವಾಗಿದ್ದಂತೆ ಈ ದಿನಗಳ ಸುಖವನ್ನು ತನ್ನ ಗೆಳೆಯರೊಡನೆ ಕೂಡಿಕೊಂಡು ಮನದಣಿಯಾಗಿ ಹೀರುವದಕ್ಕೆ ಅವನು ಹಿಂದೆ ಮುಂದೆ ನೋಡಲಿಲ್ಲ. ಅವನದು ಯಾವಾಗಲೂ ಅಷ್ಟೇ. ಕೈಯಲ್ಲಿ ಖರ್ಚಿಗೆ ಕಾಸಿದ್ದಾಗ ಉಂಡುತಿಂದು ನಕ್ಕು ನಲಿಯುವದರಲ್ಲಿ ಅವನಿಗೆ ನಾಳಿನ ದಿನದ ಪರಿವೆಯೇ ಇರುತ್ತಿರಲಿಲ್ಲ.

ಸನ್ 1922 ರ ಉತ್ತರಾರ್ಧದಲ್ಲಿ ನಜರುಲ್ ಪುಸ್ತಕಗಳು ಒಂದರ ಹಿಂದೊಂದು ಹೊರ ಬರುತ್ತಿದ್ದ ಕಾಲದಲ್ಲಿಯೇ ನಜರುಲ್‌ನ ಬಹುಕಾಲದ ಇನ್ನೊಂದು ಆಶೆಯೂ ಫಲಿಸಿತು—ತನ್ನದೇ ಆದ ಒಂದು ಪತ್ರಿಕೆಯನ್ನು ಪ್ರಕಟಿಸುವದು. ಅದೇ ಸುಪ್ರಸಿದ್ಧವಾದ 'ಧೂಮಕೇತು.'

ಸ್ವಲ್ಪಕಾಲ ಮುಂಚೆ ಅವನು ಕೊಮಿಲ್ಲಕ್ಕೆ ಹೋಗಿದ್ದನು. ಅವನು ಆಗಾಗ ಅಲ್ಲಿಗೆ ಹೋಗುತ್ತಲೇ ಇದ್ದನು. ಅವನಿಗೆ ಇನ್ನಲ್ಲಿಯೂ ದೊರೆಯದ ಪ್ರೀತಿ-ವಿಶ್ವಾಸಗಳೂ ಮನೆಯ ಹಿತವಾದ ವಾತಾವರಣವೂ ಅಲ್ಲಿ ಅವನಿಗೆ ಲಭ್ಯವಾಗಿದ್ದವು. ಸನ್ 1922 ರ ಮೇ ಅಥವಾ ಜೂನ್ ತಿಂಗಳಲ್ಲಿ 'ಸೇವಕ' ಎಂಬ ಹೊಸ ಪತ್ರಿಕೆಯಲ್ಲಿ ಕೆಲಸ ಮಾಡುವದಕ್ಕೆ ಕಲಕತ್ತೆಗೆ ಬರಬೇಕೆಂದು ಅವನಿಗೆ ಕರೆ ಬಂದಿತು. ಅದನ್ನು ಆರಂಭಿಸಿದವರು ಅಂದಿನ ಹಿರಿಯ ರಾಷ್ಟ್ರೀಯ ಪತ್ರಕಾರರೆನಿಸಿದ ಮೌಲಾನಾ ಮ. ಅಕ್ರಮ್‌ಖಾನ. (ಮುಂದೆ ಮೂವತ್ತರ ಮತ್ತು ನಾಲ್ವತ್ತರ ದಶಕಗಳಲ್ಲಿ ಅವರು ಮುಸ್ಲಿಂ ಲೀಗಿನ ಬಂಗಾಲದಲ್ಲಿ 'ಪತ್ರಿಕಾಪ್ರಭು'ವಾಗಿ ರಾಷ್ಟ್ರವಿಭಜನೆಯ ತರುವಾಯದಲ್ಲಿ ಢಾಕಾಕ್ಕೆ ಹೊರಟು ಹೋದರು). ಸೇವಕ ಪತ್ರಿಕೆಯಲ್ಲಿ ನಜರುಲ್ ಕೆಲಸ ಮಾಡಿದ್ದು ಒಂದೋ ಎರಡೋ ತಿಂಗಳಷ್ಟೇ. ಆಗ ಅವನ ಮಿತ್ರನೊಬ್ಬನು ಮುಂಗಡವಾಗಿ ಕೊಟ್ಟ ಬರಿಯ ಇನ್ನೂರು ರೂಪಾಯಿಯನ್ನೇ ಬಂಡವಾಲವಾಗಿ ಇಟ್ಟುಕೊಂಡು ನಜರುಲ್ ತನ್ನ ಸ್ವಂತದ ಪತ್ರಿಕೆಯನ್ನು ಆರಂಭಿಸಿದನು. ಅದು ವಾರದಲ್ಲಿ ಎರಡು ದಿನ ಪ್ರಕಟವಾಗುವದೆಂದು ಗೊತ್ತಾಯಿತು. ಅದಕ್ಕೆ ನಜರುಲ್ ಇಟ್ಟ ಹೆಸರು 'ಧೂಮಕೇತು'.

ಅದರ ಮೊದಲ ಸಂಚಿಕೆ ಪ್ರಕಟವಾದದ್ದು 12 ನೆಯ ಆಗಸ್ಟ 1922. ರವೀಂದ್ರನಾಥ ಟಾಗೋರ, ಶರಚ್ಚಂದ್ರ ಚಟರ್ಜೀ, ಬರೀಂದ್ರಕುಮಾರ ಘೋಷ ಮತ್ತು ಅನೇಕ ಮಹನೀಯರು ಅದನ್ನು ಆಶೀರ್ವದಿಸಿದ್ದರು. ಟಾಗೋರ ಸಂದೇಶದ ಕೊನೆಯ ಸಾಲುಗಳು ಅರ್ಥಪೂರ್ಣವಾಗಿದ್ದವು—

ಜಾಗಿಯೇ ದೇರೇ ಚಮಕ ಮೇರೇ
ಆಥೆ ಜಾರಾ ಅರ್ಧಚೇತನ
(ಕಣ್‌ದೆರೆಯಿಸುವರ ನಿನ್ನ ಬೆಳಕಿನಲೀ
ಕಣ್ ಹೊಸಕುತಿರುವರರ್ಧಎಚ್ಚರದಿ)

ಆ ಪತ್ರಿಕೆಯ ಉದ್ದೇಶವೇ ಇದಾಗಿತ್ತು. ಅಂದಿನ ಎಲ್ಲ ನಜರುಲ್ ಬರವಣಿಗೆಯ ಉದ್ದೇಶವೂ ಅದೇ ಆಗಿತ್ತು. ಜನಜಾಗೃತಿಯನ್ನು ಉಂಟು ಮಾಡುವದು, ವಾಸ್ತವವಾದ ಜೀವನವನ್ನು ಎದುರಿಸಲಾರದೆ ಮೈಮರೆಯಲೆತ್ನಿಸುತ್ತಿದ್ದವರನ್ನು ತಿವಿದು ಎಬ್ಬಿಸುವದು. 'ಧೂಮಕೇತು' ಹೊರಬಂದಕೂಡಲೆ 'ಬಿದ್ರೋಹಿ ಕವಿ'ಯು ನೇರವಾಗಿ ಬಿರುಗಾಳಿಯನ್ನೆದುರಿಸಬೇಕಾಯಿತು. ಅವನಿಗೆ ರಾಜಕೀಯ ಮಹತ್ವಾಕಾಂಕ್ಷೆಯಾವುದೂ ಇರಲಿಲ್ಲ. ರಾಜಕೀಯವಾದಗಳ ಪರಿಜ್ಞಾನವು ಅಷ್ಟಾಗಿರಲಿಲ್ಲ. ಅವನೊಬ್ಬ ಸಮರ್ಪಣೆಯ ಭಾವದ ಬರಹಗಾರನಾಗಿದ್ದುದಷ್ಟೇ. ಅದು ಜಾಣತನದ ದಾರಿ ಎನ್ನುವಂತಿರಲಿಲ್ಲ. ಏಕೆಂದರೆ ಸ್ವಭಾವತಃ ನಜರುಲ್ ದುಡುಕಿನವನೂ ದೀರ್ಘದೃಷ್ಟಿಯಿಲ್ಲದವನೂ ಆಗಿದ್ದನು. ಇದಕ್ಕೂ ಮೇಲಾಗಿ ನಜರುಲ್ ಕವಿಯೆಂದು, ಜ್ವಲಂತವಾದ ಗದ್ಯವನ್ನೂ ಬರೆಯಬಲ್ಲವನೆಂದು, ಕ್ರಾಂತಿಗಾಗಿ ಬರೆಯುವನಲ್ಲದೆ ಹೋರಾಟಕ್ಕೂ ಸಿದ್ಧನಾದವನೆಂದೂ, ಮೊದಲೇ ಪ್ರಸಿದ್ಧಿ ಇದ್ದಿತು. ಅಂದಿನ ಪರಿಸ್ಥಿತಿಯಲ್ಲಿ ಇದೆಲ್ಲವೂ ಅವನಿಂದ ಆಗಲೇ ಬೇಕಿತ್ತೆಂದು ತೋರುತ್ತದೆ.

ಆಗ ಸನ್ 1922 ವರ್ಷದ ಅಗಸ್ಟ ತಿಂಗಳು. ಬಾರಡೋಲಿ ಸಭೆಯ ತರುವಾಯ ಮಂಕಾಗಿದ್ದ ಜನರ ಉತ್ಸಾಹವು ಚರಖಾ ಮೊದಲಾದ ಕಾಂಗ್ರೆಸ ಕಾರ್ಯಕ್ರಮಗಳಿಂದ ಚುರುಕುಗೊಳ್ಳುವಂತೆ ತೋರಲಿಲ್ಲ. ಮುಂದೇನು ಎಂಬ ಪ್ರಶ್ನೆಗೆ ಯಾರೂ ಉತ್ತರವನ್ನು ಹೇಳುವಂತಿರಲಿಲ್ಲ. ಅಹಿಂಸಾ ಮತ್ತು ಚರಖಾ ಬಿಟ್ಟರೆ ಉಳಿದ ಒಂದು ದಾರಿ ಅಯರ್ಲಂಡಿನ ಸಿನ್‌ಫೀನ ರಾಷ್ಟ್ರೀಯ ಭಯೋತ್ಪಾದಕರದು. ಇನ್ನೊಂದು ಲೆನಿನ್ ತೋರಿದ ಜನಜಾಗೃತಿ ಮತ್ತು ಕ್ರಾಂತಿಯದು. ಮೊದಲನೆಯ ದಾರಿ ಬಂಗಾಲದ ಕೆಲವೇ ಭಯೋತ್ಪಾದಕರ ಮನ ಸೆಳೆಯಿತು. ಎರಡನೆಯದು ಸ್ವಾತಂತ್ರ್ಯಕ್ಕೆ ಆತುರರಾಗಿದ್ದ ಕಾರ್ಯಕರ್ತರಲ್ಲಿ ಬಹುಜನರನ್ನು ಆಕರ್ಷಿಸಿತು. ಅಕ್ಟೋಬರ ಕ್ರಾಂತಿಯ ಹರಿಕಾರರೆಂದು ತಾವಾಗಿಯೇ ಮುಂದೆ ಬಂದ ಸ್ವಾತಂತ್ರ್ಯಪ್ರೇಮಿಗಳೆಲ್ಲರೂ ಮಾರ್ಕ್ಸ-ಲೆನಿನ್ ವಾದವನ್ನು ಪೂರ್ತಿಯಾಗಿ ತಿಳಿದವರೇ ಎನ್ನುವಂತಿರಲಿಲ್ಲ. ಆ ವಿಷಯವನ್ನು ಕುರಿತಾದ ಸಾಹಿತ್ಯವು ಅಂದು ಭಾರತದಲ್ಲಿ ದೊರೆಯುತ್ತಿರಲಿಲ್ಲ. ಮಾನವೇಂದ್ರರಾಯರ 'ದಿ ವ್ಹಾನಗಾರ್ಡ' ಪ್ರಚಾರದಲ್ಲಿದ್ದರೂ, ಗಯಾ ಕಾಂಗ್ರೆಸ್ಸಿನಲ್ಲಿ (ಡಿಸೆಂಬರ 1922) ಕಮ್ಯುನಿಸ್ಟ ಪಕ್ಷದವರು ತಮ್ಮ ಜನತಾ ಕ್ರಾಂತಿಯ ವಿಚಾರಗಳನ್ನು ಹರಡಲಿಕ್ಕೆ ಯತ್ನಿಸಿದ್ದರೂ, ಬಹುಜನರ ಪಾಲಿಗೆ 'ಕೊಮಿಂಟರ್ನ' ಎಂಬದು ಬರಿ ಒಂದು ಹೆಸರಾಗಿತ್ತು. ಕೆಲವೇ ಜನರಿಗೆ ಕಮ್ಯೂನಿಜಮ್ ಒಂದು ಮನೋಭಾವವಾಗಿತ್ತು. ಪರಹಿತಕ್ಕಾಗಿ ದುಡಿಯುವದು ಎಂಬುದನ್ನಷ್ಟೇ ಅವರು ತಿಳಿದಿದ್ದರು. ಮುಜಫ್ಫರ ಅಹಮ್ಮದ ಮಾತ್ರ ಆ ಮಾರ್ಗವನ್ನು

ಪೂರ್ತಿಯಾಗಿ ಒಪ್ಪಿದ್ದನು. ನಜರುಲ್ ಅವನ ಪರಮ ಮಿತ್ರನಾಗಿದ್ದ ಕಾರಣ ಅಂದಿನ ವರೆಗೆ (1921-22) ಅವನೊಬ್ಬ 'ಫೆಲೋಟ್ರಾವೆಲರ' 'ದಾರಿಯಜತೆಗಾರ' ನಾಗಿದ್ದನೆಂದು ತಿಳಿಯಬಹುದು.

ಅಂತೂ ನಜರುಲ್ ವರೆಗೆ ಯಾರೂ 'ಅಸ್ಪೃಶ್ಯ'ರಾಗಿರಲಿಲ್ಲ, ರಾಷ್ಟ್ರೀಯತಾ ವಾದಿಗಳೂ ಅಷ್ಟೇ ಅಂತರ್ರಾಷ್ಟ್ರೀಯತಾ ವಾದಿಗಳೂ ಅಷ್ಟೇ. 'ಬಿಜಲೀ' ಪತ್ರಿಕೆಯು ಬರೀಂದ್ರಕುಮಾರ ಘೋಷರ ತಂಡಕ್ಕೆ ಸೇರಿ ಹಿಂದೆ ಕ್ರಾಂತಿಕಾರರೆನಿಸಿದ್ದವ ರನೇಕರು ನಜರುಲ್‌ನನ್ನು ಮೆಚ್ಚಿಕೊಂಡಿದ್ದರು. ಹಾಗೆಯೇ 'ಅರವಿಂದ ಪ್ರವರ್ತಕ' ಗುಂಪಿನ ಆರ್ಯ ಪಬ್ಲಿಶಿಂಗ ಹೌಸಿನ ತರುಣರನೇಕರೂ ಅವನನ್ನು ಮೆಚ್ಚಿದ್ದರು. ಹಾಗಾಗಿ ಮನುಷ್ಯರೆಲ್ಲರೂ ಸಮಾನರು ಸ್ವತಂತ್ರರು ಎಂಬ ತನ್ನ ಜ್ವಲಂತ ವಾದ ವಿಶ್ವಾಸದಿಂದ ನಜರುಲ್ ಸುಮಾರಾಗಿ ಕಮ್ಯೂನಿಸ್ಟ್ ಛಾಯೆಯವನೇ ಆಗಿದ್ದರೂ ದೈವೀಶಕ್ತಿಯಲ್ಲಿ ತನಗೆ ವಿಶ್ವಾಸವುಂಟೆಂದು ಸ್ಪಷ್ಟವಾಗಿ ಹೇಳುತ್ತಿದ್ದನು. ಈ ವಿಶ್ವಾಸ ಅವನ ಕಾವ್ಯದಲ್ಲಿ ತುಂಬಿರುತ್ತಿತ್ತು. ಮತ್ತು ಒಟ್ಟಾರೆ ಅವನ ಬೆಳವಣಿಗೆ ಯನ್ನು ಗಮನಿಸಿದರೆ ಇದು ಮಹತ್ವದ್ದಲ್ಲವೆನ್ನಲಾಗುವದಿಲ್ಲ. 'ಧೂಮಕೇತು'ವು ನಜರುಲ್ ಸ್ವಂತ ಜೀವನದಲ್ಲಿ ಬಂಡಾಯದಿನಗಳ ಧ್ವನಿಯಾಗಿದ್ದರೂ, ಅಂದಿನ ರಾಜಕೀಯ ಮನೋಧರ್ಮವನ್ನೂ ಕೂಡ ಪ್ರತಿನಿಧಿಸುತ್ತಿದ್ದರೂ, ಅದರ ಕ್ರಾಂತಿ ವಾದವು ವಿಶಿಷ್ಟವಾಗಿ 'ನಜರುಲ್‌ವಾದ'ವೇ ಆಗಿತ್ತು. ಅದರ ದೃಷ್ಟಿಕೋನ ರಾಷ್ಟ್ರೀವಾಗಿದ್ದಷ್ಟೇ ಅಂತರ್ರಾಷ್ಟ್ರೀಯವೂ ಆಗಿತ್ತು. ಮುಖ್ಯವಾಗಿ ಅದು ಹೋರಾಟ ಹೂಡಿದ್ದು ಸ್ವಾತಂತ್ರ್ಯ ಸಮತೆ ಬಂಧುಭಾವಗಳಿಗಾಗಿ. ಅದರಲ್ಲಿ ನಜರುಲ್‌ನ ಜಾತ್ಯತೀತವಾದ ನಿಲುವೂ ಯಾವ ಪಂಗಡಕ್ಕೂ ಸೇರದ ಆಸ್ತಿಕ ಭಾವವೂ ಸ್ಪಷ್ಟವಾಗಿ ಕಾಣುತ್ತಿದ್ದವು. ಜಾತಿಭೇದಗಳಿಲ್ಲದ ಒಂದು ತರಹದ ಕಮ್ಯೂನಿಸ್ಟ ಸಮಾಜ ಅವನಿಗೆ ಇಷ್ಟವಾದ ಗುರಿಯಾಗಿತ್ತು.

ನಜರುಲ್ ಜೀವನ ಅವನ ಮನೋಭೂಮಿಕೆ ಮತ್ತು ಅಂದಿನ ರಾಜಕೀಯ ವಿಚಾರಗಳನ್ನು ತೋರಿಸುವದಕ್ಕೆ "ಧೂಮಕೇತು"ವಿನಿಂದ ಕೆಲವು ಅವತರಣಿಕೆ ಗಳನ್ನು ಉದಾಹರಿಸಬಹುದು. ಭಾಷಾಂತರಗಳಾದ್ದರಿಂದ ಇವುಗಳಲ್ಲಿ ಮೂಲದ ಬಣ್ಣವಾಗಲೀ ಬಿಸಿಯಾಗಲೀ ತಿಳಿಯಲಾರದು—

"ಮಾ ಭೈಃ" (ಹೆದರಬೇಡ) ಎಂಬ ಶಬ್ದಗಳಲ್ಲಿ ಶ್ರದ್ಧೆಯನ್ನಿಟ್ಟು, 'ಸರ್ವನಾಶದ ಸ್ವಾಮಿಗೆ ಜಯವಾಗಲಿ' ಎಂದು ಕೂಗಿ, ನಾನು ಈ ಮಾರ್ಗದಲ್ಲಿ ಮುನ್ನಡೆ ಯುವದಕ್ಕೆ ಸಿದ್ಧನಾಗಿದ್ದಾನೆ. ನನ್ನ ರಥ 'ಧೂಮಕೇತು'. ನನ್ನ ಮಾರ್ಗದರ್ಶಕ ನಾನೇ. ನಾನು ನಡೆಯಬೇಕಾದ ದಿಕ್ಕನ್ನು ಸತ್ಯವು ನನಗೆ ತೋರಿಸುವದು. ಹೀಗೆ ತನ್ನನ್ನು ತಾನು ತಿಳಿದಿರುವುದು, ತನ್ನ ಸತ್ಯವನ್ನು ತಿಳಿದಿರುವುದು, ತಾನೇ ತನ್ನ ಗುರು ಮತ್ತು ಪ್ರೇರಕನೆನ್ನುವದು, ತನ್ನ ಭವಿತವ್ಯದ ದಾರಿಯನ್ನು ತಾನೇ ಹುಡುಕಿ ಕೊಳ್ಳಬೇಕೆನ್ನುವುದು, ದುರಹಂಕಾರವಲ್ಲ, ಜಂಬಕೊಚ್ಚಿಕೊಳ್ಳುವದಲ್ಲ. ತನ್ನನ್ನು ತಾನು ತಿಳಿದಿದ್ದೇನೆನ್ನುವದನ್ನು ಸಾರಿ ಹೇಳುವದಷ್ಟೇ ಇದರ ಉದ್ದೇಶ."

ಇಲ್ಲಿ ಅವನು ತನ್ನ ಶ್ರದ್ಧೆಯನ್ನು ಸ್ಪಷ್ಟವಾಗಿ ಸಾರುವುದನ್ನು ಕಾಣಬಹುದು: ತನ್ನ ವ್ಯಕ್ತಿತ್ವಕ್ಕೆ ತಾನು ನಿಷ್ಠನಾಗಿರುವದು; ತನಗೆ ಸತ್ಯವೆಂದು ತೋರಿದ್ದನ್ನು ಸ್ಪಷ್ಟವಾಗಿ ಹೇಳುವದು; ಮತ್ತು ಅದು ತೋರಿದ ದಾರಿಯಲ್ಲಿ 'ಭಯದ ಸಂಗಾತಿ' ಯಾಗಿ ಜೀವಿಸುವದು. ತನ್ನ ಗುರಿಯನ್ನು ಅವನು ಇದಕ್ಕಿಂತಲೂ ಸ್ಪಷ್ಟವಾಗಿ ಹೇಳಿದ್ದೂ ಇದೆ—

"ಈ ದೇಶ ತನ್ನ ಕೆಚ್ಚಿನವರೆಗೆ, ಎಲುಬಿನ ಒಳಗಿನ ಮಜ್ಜೆಯವರೆಗೆ ಕೊಳೆತಿದೆ. ಆ ಕೊಳಕನ್ನು ಪೂರ್ತಿಯಾಗಿ ಹೊರಗೆ ಹಾಕದೆ ನವನಿರ್ಮಾಣ ಸಾಧ್ಯವಿಲ್ಲ. ಅಸತ್ಯವನ್ನೂ ವಂಚನೆಯನ್ನೂ ದಂಭವನ್ನೂ ದೇಶಕ್ಕೆ ದ್ರೋಹ ಬಗೆಯುವವರೆಲ್ಲರನ್ನೂ ಧೂಮಕೇತುವು ತನ್ನ ಉರಿಯಿಂದ ಧ್ವಂಸ ಮಾಡುವದು."

ಈ ಉದ್ದೇಶವನ್ನು ಹೆಚ್ಚು ಹೆಚ್ಚು ಸ್ಪಷ್ಟವಾಗಿ ಮತ್ತೆ ಮತ್ತೆ ಹೇಳಲಾಗಿದೆ—

"ಧೂಮಕೇತು ಯಾವದೇ ಜಾತಿಯ ಮುಖವಾಣಿಯಲ್ಲ. ಮಾನವಧರ್ಮವೇ ಅದಕ್ಕೆ ತಿಳಿದಂತೆ ಪರಮ ಧರ್ಮ. ಹಿಂದೂ-ಮುಸ್ಲಿಮ ಐಕ್ಯದ ದಾರಿಗೆ ಅಡ್ಡಲಾಗಿರುವ ಆತಂಕಗಳನ್ನೂ ಎತ್ತಿ ತೋರಿಸುವದು ಮತ್ತು ತೆಗೆದು ಹಾಕುವದು, ಅದು ಕೈಕೊಂಡ ಕಾರ್ಯಗಳಲ್ಲಿ ಒಂದು. ಯಾವನು ತನ್ನ ಧರ್ಮವೇನೆಂಬದನ್ನು ತಿಳಿದಿರುವನೋ, ಅದರಲ್ಲಿ ವಿಶ್ವಾಸವುಳ್ಳವನಾಗಿರುವನೋ, ಅಂಥವನು ಇನ್ನೊಬ್ಬರ ಧರ್ಮವನ್ನು ದ್ವೇಷಿಸುವದು ಸಾಧ್ಯವಿಲ್ಲ."

ಧೂಮಕೇತುವಿನ ಇನ್ನೊಂದು ಸಂಚಿಕೆಯಲ್ಲಿ ನಜರುಲ್ ತನ್ನ ರಾಜಕೀಯ ವಿಚಾರಗಳನ್ನೂ ಹೀಗೆಯೇ ಒತ್ತಿ ಹೇಳಿದ್ದಾನೆ—

"ಜನರು ನನ್ನನ್ನು ಮತ್ತೆ ಮತ್ತೆ ಕೇಳುತ್ತಾರೆ ಧೂಮಕೇತುವಿನ ಮಾರ್ಗ ಯಾವುದು ಎಂದು. ಮೊದಲನೆಯದಾಗಿ ಧೂಮಕೇತುವು ಭಾರತಕ್ಕೆ ಸಂಪೂರ್ಣ ಸ್ವರಾಜ್ಯವು ಬೇಕು ಎನ್ನುತ್ತದೆ. 'ಸ್ವರಾಜ್ಯ'ದಂತಹ ಶಬ್ದಗಳ ಅರ್ಥವೇನು ಎಂಬುದರ ಗೊಡವೆ ನಮಗಿಲ್ಲ. ಏಕೆಂದರೆ ನಮ್ಮ ಮುಂದಾಳುಗಳು ಅನೇಕ ಅರ್ಥಗಳನ್ನು ಹೇಳುತ್ತಿದ್ದಾರೆ. ನಾವು ಸಂಪೂರ್ಣವಾಗಿ ಸ್ವತಂತ್ರರಾಗಬೇಕಾದರೆ ಎಲ್ಲಕ್ಕೂ ಮೊದಲು ನಾವು ಎಲ್ಲಾ ಕಾಯಿದೆ ಕಾನೂನುಗಳ ವಿರುದ್ಧವಾಗಿ ವಿಧಿ ನಿಷೇಧಗಳ ವಿರುದ್ಧವಾಗಿ ಬಂಡೇಳಬೇಕು. ಹಾಗೆ ಬಂಡೇಳುವದಕ್ಕೆ ಮೊದಲು ತನ್ನನ್ನು ತಾನು ತಿಳಿದಿರಬೇಕು. ಬಂಡೇಳುವದೆಂದರೆ ಎಲ್ಲವನ್ನೂ ಅಲ್ಲಗಳೆಯುವದಲ್ಲ. ಬಂಡೇಳುವದೆಂದರೆ ಯಾವುದು ತನಗೆ ಅರ್ಥಹೀನವೆಂದು ತೋರುವದೋ ಅದನ್ನು ಕುರಿತು "ಇದು ನನಗೆ ಒಪ್ಪಿಗೆ ಇಲ್ಲ" ಎಂದು ತಲೆ ಎತ್ತಿ ಸಾರುವದು, ಧೂಮಕೇತುವಿನ ದೃಷ್ಟಿ ಇದು—ನಿನ್ನ ಹೃದಯದ ಮಾರ್ಗದರ್ಶನದಂತೆ ನೀನು ನಡೆ. ಧರ್ಮ, ಸಮಾಜ, ರಾಜ, ದೇವರು, ಇದಾವುದಕ್ಕೂ ಹೆದರಬೇಡ. ಬಂಡಾಯವೇಳದೆ ಸತ್ಯವನ್ನು ಕಾಣುವದು ಸಾಧ್ಯವಿಲ್ಲ. ನೀವು ಸರಿಯಾಗಿ ಬಂಡಾಯವೆದ್ದರೆ, ಪ್ರಳಯಕ್ಕೆ ಕರೆ ನೀಡಿದರೆ, ಶಿವನು ಎದ್ದು ಬರುವನು, ಕಲ್ಯಾಣಕ್ಕೆ ಜಯವಾಗುವುದು".

ಇಲ್ಲಿ ನಾವು ಹೇಳಬೇಕಾದುದನ್ನು ಸಮರ್ಥಿಸುವದಕ್ಕೆ ಇಷ್ಟು ಉದಾಹರಣೆಗಳು ಸಾಕು. ಮೂಲದಲ್ಲಿಯ ಭಾವಾವೇಶವೂ ಶಬ್ದಸೌಷ್ಠವವೂ ಶೈಲಿಯ ಓಘವೂ

ಭಾಷಾಂತರದಲ್ಲಿ ಕಂಡುಬರಲಾರವು. ಆದರೆ ನಜರುಲ್‌ನ ಮೂಲ ವಿಚಾರಗಳು, ಅವನ ರಾಜಕೀಯ ಕಲ್ಪನೆಗಳು, ಕ್ರಾಂತಿಯ ಬಗೆಗೆ ಅವನಿಗಿದ್ದ ಉತ್ಸಾಹಗಳನ್ನು ಸುಲಭವಾಗಿ ಗುರುತಿಸಬಹುದು. ಅವನ ಭಾವನೆಗಳು ನೈಜವಾಗಿದ್ದಷ್ಟೇ ಅವನ ಕಲ್ಪನೆಗಳು ಅಸ್ಪಷ್ಟವಾಗಿದ್ದವು ಎಂಬದನ್ನೂ ಕಾಣಬಹುದು. ಧೂಮಕೇತುವಿನಲ್ಲಿಯ ಕೆಲವು ಸಂಪಾದಕೀಯ ಬರಹಗಳೂ ಮತ್ತು ಉದ್ದೇಶಗಳ ಘೋಷಣೆಗಳೂ ಮುಂದೆ ಎರಡು ಗದ್ಯಸಂಕಲನಗಳಾಗಿ ಪ್ರಕಟವಾದವು : ದುರ್ದಿನೇರ ಯಾತ್ರಿ 1938, ರುದ್ರ ಮಂಗಲ 1941. ಧೂಮಕೇತುವಿನಲ್ಲಿ ಪ್ರಕಟವಾದ ಕವಿತೆಗಳು 1924 ರಲ್ಲಿ 'ಬಿಷೇರ ಬನ್ಶೀ' ಮತ್ತು 'ಭಂಗಾರ ಗಾನ' ಎಂಬ ಸಂಕಲನಗಳಲ್ಲಿ ಸೇರ್ಪಡೆಯಾದವು. ಇವುಗಳನ್ನು ಕುರಿತು ಮುಂದೆ ಇನ್ನೂ ಹೇಳುವುದಿದೆ. ಕೆಲವು ಕವಿತಾ ಸಂಕಲನಗಳು ಪ್ರಕಟವಾದ ಕೂಡಲೇ ನಿಷೇಧಾಜ್ಞೆಗೆ ಒಳಪಟ್ಟವೆಂಬದನ್ನು ಇಲ್ಲಿ ಹೇಳಿದರೆ ಸಾಕು.

ಪ್ರಸ್ತುತ ಸಂದರ್ಭವನ್ನು ಮುಂದರಿಸುವದಕ್ಕೆ ಇಲ್ಲಿ ಹೇಳಬೇಕಾದದ್ದೆಂದರೆ ಅಂದಿನ ಬಂಗಾಲೀ ಜನಗಳು, ವಿಶೇಷವಾಗಿ ತರುಣರು, ಧೂಮಕೇತುವಿನ ಒಂದೊಂದು ಸಂಚಿಕೆ ಬಂದಬಂದಂತೆ ಉತ್ಸಾಹದಿಂದ ಹುಚ್ಚೆದ್ದು ಕುಣಿದರು. ರಾಷ್ಟ್ರೀಯ ಕ್ರಾಂತಿವಾದಿಗಳೆಲ್ಲರೂ ಅದನ್ನು ಸ್ವಾಗತಿಸಿದರು. ಪ್ರತಿಯೊಂದು ಸಂಚಿಕೆಗೆ ಬರಬೇಕಾದ ಹಣವು ಮುಂಗಡವಾಗಿಯೇ ಬಂದಿರುತ್ತಿತ್ತು. ಮತ್ತು ಪ್ರತಿಯೊಂದು ಸಂಚಿಕೆ ಹೊರಗೆ ಬಂದ ದಿನ ಸಾಯಂಕಾಲದಲ್ಲಿ ಧೂಮಕೇತುವಿನ ಕಾರ್ಯಾಲಯದಲ್ಲಿ ಬಂಗಾಲಿಗಳ ವಿಶಿಷ್ಟವಾದ "ಅಡ್ಡಾ" ಸೇರಿ ಆ ಹಣವೆಲ್ಲ ಅದರ ಚಹ ತಾಂಬೂಲಗಳಿಗೆ ಖರ್ಚಾಗುತ್ತಿತ್ತು. (ಧೂಮಕೇತುವಿನ ಕಾರ್ಯಾಲಯವು ಇಷ್ಟರಲ್ಲಿ 32 ಕಾಲೇಜ ಸ್ಕ್ವೇರಿನಿಂದ 7 ಪ್ರತಾಪ ಚಟರ್ಜೀ ಲೇನಗೆ ಸ್ಥಳಾಂತರ ಹೊಂದಿತ್ತು). ಕವಿಗಳು, ಲೇಖಕರು, ರಾಜಕೀಯ ಕಾರ್ಯಕರ್ತರು, ನಜರುಲ್‌ನ ಬಂಡುಗಾರ ಗೆಳೆಯರು ಎಲ್ಲರೂ ಈ 'ಅಡ್ಡಾ'ಗಳಲ್ಲಿ ಸೇರಿ ಒಂದರ ಮೇಲೊಂದು ಕಪ್ಪು ಚಹ ಹೀರುತ್ತ ಉತ್ಸಾಹಭರಿತವಾದ ಹರಟೆಯಲ್ಲಿ ತೊಡಗುತ್ತಿದ್ದರು. 'ದೇ ಗೋರೂರ ಗಾ ಧುಇಯೇ' (ಆಕಳ ಮೈ ತೊಳೆಯಿಸು) ಎಂಬ ಅರ್ಥವಿಲ್ಲದ ಒಂದು ಕೂಗು ನಜರುಲ್ ಮತ್ತು ಅವನ ಮಿತ್ರರಲ್ಲಿ ಒಂದು ಪ್ರಿಯವಾದ ಸಂಬೋಧನೆಯ ರೀತಿಯಾಗಿತ್ತು. ನಜರುಲ್ ಹೋದಲ್ಲೆಲ್ಲ ಅವನನ್ನು ಸುತ್ತಿಕೊಂಡಿರುತ್ತಿದ್ದ ಬಂಡಾಯ ಮತ್ತು ಉತ್ಸಾಹದ ವಾತಾವರಣವನ್ನು ಅದು ಧ್ವನಿಸುತ್ತಿತ್ತು. ಅವನ ಜೀವಮಾನದಲ್ಲಿ ಗೆಲವಿನ ದಿನಗಳನ್ನು ಅವನು ಕಂಡದ್ದು ಇದೇ ಮೊದಲ ಸಲವಾಗಿತ್ತು.

ಆದರೆ ಬಂಗಾಲದ ಪೋಲೀಸ ರಾಜ್ಯವು ಇದನ್ನು ಹೆಚ್ಚು ದಿನ ನಡೆಯಗೊಡಲಿಲ್ಲ. ಧೂಮಕೇತುವಿನ ಒಂದೊಂದು ಸಂಚಿಕೆಯೂ ಅದರ ಮೂಲಾಧಾರವನ್ನೇ ಕೆಣಕುತ್ತಿತ್ತು ಮತ್ತು 'ಶಾಂತಿ ಸುವ್ಯವಸ್ಥೆ ಒಳ್ಳೆಯ ಆಡಳಿತ'ಗಳಿಗೆ ಗಂಡಾಂತರವನ್ನೊಡ್ಡುತ್ತಿತ್ತು. ಆದ್ದರಿಂದ 'ಧೂಮಕೇತು' ಅಲ್ಪಾಯುಷಿಯಾಗುವುದು ಅನಿವಾರ್ಯವಾಗಿತ್ತು. ಆಗ ಪೂಜಾದಿನಗಳು ಸಮೀಪಿಸಿದ್ದವು. ಬಂಗಾಲದ ಪತ್ರಿಕೆಗಳೆಲ್ಲವೂ ಪೂಜಾದಿನಗಳ ವಿಶೇಷ ಸಂಚಿಕೆಗಳನ್ನು ಹೊರಡಿಸುವದು ವಾಡಿಕೆ

ಯಾಗಿತ್ತು. ವಾಡಿಕೆಯಂತೆ ತನ್ನ ವಿಶೇಷ ಸಂಚಿಕೆಗೆ ನಜರುಲ್ 'ಆನಂದ ಮಯೀರ ಆಗಮನೇ' ಎಂಬ ಕವಿತೆಯನ್ನು ಬರೆದು ಆನಂದಮಯಿ ದುರ್ಗಾದೇವಿಯನ್ನು ಆವಾಹಿಸಿದನು.

ಪರಂಪರಾಗತ ಶ್ರದ್ಧೆಯಂತೆ ದುರ್ಗಾದೇವಿಯು ದೈತ್ಯರನ್ನೂ ಕ್ರೂರಿಗಳನ್ನೂ ನಾಶಮಾಡುವ 'ಚಂಡಿ.' ಭಕ್ತರನ್ನು ರಕ್ಷಿಸುವ ಪ್ರಚಂಡಳು. ಈ ಮಾತೃದೇವತೆಯು ಸಹಜವಾಗಿಯೇ ಜನ್ಮಭೂಮಿಯ ರೂಪದಲ್ಲಿ ಕಂಡಳು. ಈ ಕಲ್ಪನೆಯು ಮೊದಲು ಪ್ರಚಾರ ಪಡೆದದ್ದು ಬಂಕಿಮಚಂದ್ರ ಚಟರ್ಜಿಯವರ 'ಕಮಲಾಕಾಂತೇರದಫ್ತರ' ದಲ್ಲಿಯ 'ಆಮಾರ ದುರ್ಗೋತ್ಸವ' ಎಂಬ ಪ್ರಬಂಧದಲ್ಲಿ (1873) ಮತ್ತು ಆಮೇಲೆ ಅವರದೇ ಕಾದಂಬರಿ 'ಆನಂದ ಮಠ'ದಲ್ಲಿ (1882-83). ದೇಶದಲ್ಲಿ ದಬ್ಬಾಳಿಕೆ ನಡೆಸುತ್ತಿದ್ದ ಪರಕೀಯರನ್ನು ಹೊರದೂಡುವುದಕ್ಕೆ ಆಯುಧಗಳನ್ನೆತ್ತಿರೆಂದು ಈ ಜನ್ಮಭೂಮಿ ತನ್ನ ಮಕ್ಕಳಿಗೆ ಕರೆಕೊಡುತ್ತಾಳೆಂಬ ಕಲ್ಪನೆಯು ಸಲವತ್ತು ವರ್ಷಗಳ ಕಾಲದಲ್ಲಿ ಬೆಳೆದು ದೃಢವಾಗಿತ್ತು. ವೈಯೆಲ್ಲ ಕಣ್ಣಾಗಿದ್ದ ಪೋಲೀಸರಿಗೆ ದೇವಿಯ ಆವಾಹನೆಯ ಮರೆಯಲ್ಲಿ ಕ್ರಾಂತಿಯ ಆವಾಹನೆ ನಡೆಯುವದು ಕಾಣದೆ ಹೋಗಲಿಲ್ಲ. ಕವಿತೆಯ ಭಾವಪುಷ್ಟಿಗೆ ಎಷ್ಟು ಬೇಕಿತ್ತೊ ಅಷ್ಟಕ್ಕಿಂತ ಹೆಚ್ಚಿನದೇನನ್ನೂ ನಜರುಲ್ ಬರೆದಿರಲಿಲ್ಲ. ಸಂಪ್ರದಾಯಕ್ಕೆ ಒಪ್ಪಿಗೆಯಾದಂತೆ ದಬ್ಬಾಳಿಕೆ ನಡಸುವವರನ್ನು ನಾಶಮಾಡುವ ದೇವತೆಯ ಕಲ್ಪನೆಯು ಸ್ವಾತಂತ್ರ್ಯ ಪ್ರಿಯನಾದ ಕವಿಯ ಮನಸಿಗೆ ಒಪ್ಪಿತ್ತು. ಆದರೆ ಕವಿತೆಯ ಶೈಲಿ ಮತ್ತು ಪದಬಂಧಗಳು ಸಾಂಪ್ರದಾಯಿಕವಾಗಿರಲಿಲ್ಲ. ಅದರಲ್ಲಿ ಗ್ರಾಂಥಿಕ ಭಾಷೆಯ ಬಿಗುವು, ಶ್ರೀಮದ್ಗಾಂಭೀರ್ಯಗಳಿರದೆ ಆಡುಮಾತಿನ ಸರಳತೆ ಇದ್ದಿತು. ಮತ್ತು ಆದರಲ್ಲಿ ಸಮಕಾಲೀನವಾದ ಘಟನೆಗಳ ಮತ್ತು ಜನತೆಯ ವಿರುದ್ಧ ಪೋಲೀಸರು ಕೈಕೊಂಡ ಕಾರ್ಯಾಚರಣೆಗಳ ಸೂಚನೆ ಇದ್ದಿತು. ಅದರಲ್ಲಿಯ ಅಣಕದ ಕೊರೆತ ಬಲವಾಗಿತ್ತು ಮತ್ತು ರಾಕ್ಷಸೀಯ ದಬ್ಬಾಳಿಕೆಯ ನಿಂದೆ ಕಟುವಾಗಿತ್ತು. ಅದು ಹೊರಬಂದ ಕ್ಷಣದಲ್ಲಿಯೇ ಪೋಲೀಸರು ಪತ್ರಿಕೆಯ ಸಂಪಾದಕನ ಮತ್ತು ಕವಿತೆಯ ಲೇಖಕನ ಬಂಧನಕ್ಕೆ ವಾರಂಟು ಹಿಡಿದುಕೊಂಡು ಧೂಮಕೇತುವಿನ ಕಾರ್ಯಾಲಯಕ್ಕೆ ನುಗ್ಗಿದರು. ಅಲ್ಲಿ ಸಿಕ್ಕಿದ ಆ ಸಂಚಿಕೆಯ ಪ್ರತಿಗಳೆಲ್ಲವನ್ನೂ ಜಪ್ತು ಮಾಡಿದರು. ಆದರೆ ಸಂಪಾದಕನು ಅಲ್ಲಿ ಅವರಿಗೆ ಸಿಕ್ಕಲಿಲ್ಲ. ಆಗ ಅವನು ಕಲಕತ್ತೆಯಲ್ಲಿಯೇ ಇರಲಿಲ್ಲ. ಆ ಮೇಲೆ ಅವನು ಕೋಮಿಲ್ಲಕ್ಕೆ ಹೋಗಿ ತನ್ನ ಮೊದಲಿನ ಆತಿಥೇಯ ಇಂದ್ರಕುಮಾರ ಸೇನಗುಪ್ತರ ಮನೆಯಲ್ಲಿ ಉಳಿದನು. ಕೆಲದಿನಗಳ ವರೆಗೆ ಅವನು ಅಲ್ಲಿ ಸುರಕ್ಷಿತವಾಗಿ ಇದ್ದನು. ಧೂಮಕೇತು ಯಥಾಪ್ರಕಾರ ಪ್ರಕಟವಾಗುತ್ತಲೇ ಇದ್ದಿತು.

ಅದರ ದೀಪಾವಳಿ ಸಂಚಿಕೆಯಲ್ಲಿ ಮತ್ತೆ ಖಾರವಾದ ಒಂದು ಸಂಪಾದಕೀಯ ಪ್ರಕಟವಾಯಿತು. ಅದರ ಶೀರ್ಷಿಕೆ 'ಮೈಂ ಭೂಖಾ ಹೂಂ' (ನಾನು ಹಸಿದಿದ್ದೇನೆ). ದೇವಿಯು ರಕ್ತದ ಬಲಿದಾನವನ್ನು ಕೇಳುವಳೆಂಬ ಭಾವನೆ ಅದರಲ್ಲಿ ವ್ಯಕ್ತವಾಗಿತ್ತು. ಪೋಲೀಸರ ಚಟುವಟಿಕೆ ಮತ್ತೆ ಜೋರಾಯಿತು. ನಜರುಲ್‌ನನ್ನು ಕೋಮಿಲ್ಲದಲ್ಲಿ ಪತ್ತೆ ಮಾಡಿ ಬಂಧಿಸಿ ಕಲಕತ್ತೆಗೆ ತಂದರು. ಪ್ರೆಸಿಡೆನ್ಸಿ ಮೆಜಿಸ್ಟ್ರೇಟರ ಕೋರ್ಟಿನಲ್ಲಿ

ಅವನ ಮೇಲೆ ರಾಜದ್ರೋಹದ ಆಪಾದನೆಯ ವಿಚಾರಣೆ ನಡೆಯಿತು. ಆಪಾದನೆ ರುಜುವಾತಾಯಿತೆಂಬ ನಿರ್ಣಯವು ಕಂಡದ್ದೇ ಆಗಿತ್ತು. ಸನ್ 1923 ಜನವರಿ 16 ನೆಯ ದಿನ ಕವಿಗೆ ಒಂದು ವರ್ಷದ ಕಠಿಣ ಶಿಕ್ಷೆಯನ್ನು ವಿಧಿಸಿದ್ದಾಯಿತು. ಆ ವಿಚಾರಣೆಯಲ್ಲಿ ಅವನು ಆಪಾದಿತನ ಸ್ಥಾನದಲ್ಲಿ ನಿಂತು ಓದಿದ ಹೇಳಿಕೆಯು 'ರಾಜ ಬಂದೀರ ಜಬಾನಬಂದೀ' ಎಂದು ಪ್ರಖ್ಯಾತವಾಯಿತು. ಅದರ ಭಾವಾವೇಶವೂ ಉನ್ನತವಾದ ಧ್ಯೇಯವಾದವೂ ಅದರ ಸಾಹಿತ್ಯ ಗುಣದಷ್ಟೇ ಗಣನೀಯವಾಗಿವೆ. ಅದರಲ್ಲಿಯ ವಿವರಗಳೂ ವಿಚಾರಗಳೂ ಅಂದಿನ ಕಾಲದ ಕೋರ್ಟುಗಳಲ್ಲಿ ರಾಜಕೀಯ ಕೈದಿಗಳು ಕೊಡುತ್ತಿದ್ದ ಹೇಳಿಕೆಗಳಂತೆ ಇರಲಿಲ್ಲ. (ಸ್ವಲ್ಪ ಕಾಲ ಮುಂಚೆಯೇ ಗಾಂಧೀಜಿಯವರು ಕೊಟ್ಟ ಹೇಳಿಕೆ ಪ್ರಕಟವಾಗಿತ್ತು). ಇವನ ಹೇಳಿಕೆ ನೇರವಾಗಿ ಸುಲಭವಾಗಿತ್ತು. ಗಾಂಧೀಜಿಯವರು ಯಾವುದನ್ನು 'ಸೈತಾನ ಸರಕಾರ'ವೆನ್ನ ಬಹುದಿತ್ತೊ, ಅದರ ಎಲ್ಲ ನ್ಯಾಯಾಂಗ ಕಾರ್ಯಾಂಗಗಳನ್ನು ಮುಚ್ಚುಮರೆಯಿಲ್ಲದೆ ಧಿಕ್ಕರಿಸುವದು ಅದಾಗಿತ್ತು. ಸತ್ಯಸ್ಥಿತಿಯನ್ನು ಎತ್ತಿಸುಡಿಯುವ ಕವಿವಾಣಿ ದೇವರ ವಾಣಿಯೆಂದು ಅದು ನಿರ್ಭಯವಾಗಿ ಸಾರಿತು. ಭಾರತದ ಹಿತವನ್ನೂ ದೇವರು ಮತ್ತು ಧರ್ಮದ ಪಕ್ಷವನ್ನೂ ಎತ್ತಿಹಿಡಿದು ಎಲ್ಲ ವಿಧದ ದುಷ್ಟತನವನ್ನು ನಾಶ ಮಾಡುವದು ಅದೆಂದು ಸಾರಿತು :

"ಸತ್ಯವನ್ನು ಕಾಪಾಡಿ ನ್ಯಾಯವನ್ನು ಮರಳಿ ಪಡೆಯುವ ವಿಶ್ವಕ್ರಾಂತಿಯ ಕೆಂಪು ಸೈನಿಕನು ನಾನೆಂಬದು ನನಗೆ ಖಚಿತವಾಗಿ ತಿಳಿಯಿತು. ರಾಕ್ಷಸರ ಮಾಯೆಗೆ ಒಳಗಾಗಿ ಮೈಮರೆತಿದ್ದ ಬಂಗಾಲದ ಹಚ್ಚ ಹಸಿರು ನಾಡನ್ನು ಕಹಳೆಯ ಕೂಗಿನಿಂದ ಎಚ್ಚರಿಸುವದಕ್ಕೆ ದೇವರು ನನ್ನನ್ನು ಹರಿಕಾರನೆಂದು ಕಳಿಸಿದ್ದಾನೆ. ನಾನೊಬ್ಬ ಆಜ್ಞಾಧಾರಕನಾದ ಸೈನಿಕ. ಅವನ ಅಪ್ಪಣೆಯನ್ನು ನನ್ನ ಕೈಲಾದ ಮಟ್ಟಿಗೆ ನಡೆಸಿದ್ದೇನೆ" ಇದು ಆ ಹೇಳಿಕೆಯ ಧಾಟಿ. ಇಂದಿಗೂ ಅದೊಂದು ಸ್ಮರಣೀಯವಾದ ಬರಹವಾಗಿದೆ. ನಜರುಲ್ ದೋಷಿಯೆಂದು ನಿರ್ಧರಿಸಲ್ಪಟ್ಟು ಶಿಕ್ಷೆಗೆ ಗುರಿಯಾದದ್ದನ್ನು ಹೇಳಿಯಾಗಿದೆ.

ಧೂಮಕೇತುವಿನ ಪ್ರಕಟನೆ ಮೊದಲು ಎರಡುವಾರಗಳ ಮಟ್ಟಿಗೆ ನಿಂತಿತು, ತರುವಾಯ ಅದು ಅರ್ಧಮಾಸಿಕವೆಂದು ಪ್ರಕಟವಾಗತೊಡಗಿತು. ಮೊದಲು ನಜರುಲ್‌ನ ಸಹಾಯಕನಾಗಿದ್ದ ಬೀರೇಂದ್ರನಾಥ ಸೇನಗುಪ್ತ ಅದರ ಸಂಪಾದಕನಾದನು. (ಮುಂದೆ ಅವನು ಫ್ರೀ ಪ್ರೆಸ್ ಆಫ್ ಇಂಡಿಯಾದಲ್ಲಿ ಸೇರಿದನು. ನಜರುಲ್‌ನ ಮಿತ್ರನೂ ಆಪ್ತನೂ ಆದ ಕೋಮಿಲ್ಲದ ಬೀರೆಂದ್ರಕುಮಾರ ಸೇನಗುಪ್ತ ಇವನಲ್ಲ). ಧೂಮಕೇತುವಿನ ಮೊದಲನೆಯ ಅರ್ಧಮಾಸಿಕ ಸಂಚಿಕೆಯಲ್ಲಿ ಅವನು ಕೋರ್ಟಿನಲ್ಲಿ ನೀಡಿದ 'ರಾಜಬಂದೀರ ಜಬಾನಬಂದೀ' ಪ್ರಕಟವಾಯಿತು. ಅದೇ ಹೇಳಿಕೆಯು ಆಮೇಲೆ 'ಪ್ರಬರ್ತಕ' ಮತ್ತು 'ಉಪಾಸನಾ' ಎಂಬ ಮಾಸಪತ್ರಿಕೆಗಳಲ್ಲಿಯೂ ಪ್ರಕಟವಾಯಿತು. ಇದರ ತರುವಾಯ ಒಂದೇ ಅರ್ಧಮಾಸಿಕ ಸಂಚಿಕೆಯನ್ನು ಪ್ರಕಟಿಸಿ ಧೂಮಕೇತು ನಿಂತುಹೋಯಿತು. ನಜರುಲ್ ಅದರ ದೇಹ ಪ್ರಾಣಗಳೆರಡೂ ಆಗಿದ್ದನು. ಅವನಿಲ್ಲದೆ ಅದು ಉಳಿಯುವದು ಸಾಧ್ಯವಿರಲಿಲ್ಲ.

ಮುಂದೆ ಕಾಲಬದಲಿಸಿದರೂ ಅದರ ಪುನರುಜ್ಜೀವನವಾಗಲಿಲ್ಲ. ಏಕೆಂದರೆ ಆಗ ನಜರುಲ್ ತನ್ನ ಜೀವನದಲ್ಲಿ ಬೇರೊಂದು ಘಟ್ಟವನ್ನೇ ತಲುಪಿದ್ದನು. ಹತ್ತುವರ್ಷಗಳ ನಂತರ 1931 ರಲ್ಲಿ ಕೆಲವು ಉತ್ಸಾಹಿಗಳು ನಜರುಲ್‌ನ ಒಬ್ಬ ಮಿತ್ರನನ್ನು ಸಂಪಾದಕ ನೆಂದು ನಿಯಮಿಸಿ ಧೂಮಕೇತುವನ್ನು ಮತ್ತೆ ಆರಂಭಿಸುವ ಯತ್ನಮಾಡಿದರು, ಅದು 'ಕಾಝಿ ನಜರುಲ್ ಇಸ್ಲಾಮರ ಮಾರ್ಗದರ್ಶನದಲ್ಲಿ' ನಡೆಯುವದೆಂದು ಸಾರುವದಕ್ಕೆ ನಜರುಲ್‌ನ ಒಪ್ಪಿಗೆಯನ್ನೂ ಪಡೆದರು. ಆದರೆ ನಜರುಲ್ ಅದರಲ್ಲಿ ಹೆಚ್ಚಿನ ಆಸ್ಥೆಯನ್ನು ತೋರಲಿಲ್ಲ. ಅವನ ಮಟ್ಟಿಗೆ 1923 ಜನವರಿಯಲ್ಲಿ ಅವನು ಜೈಲಿಗೆ ಹೋದಂದಿನಿಂದ ಧೂಮಕೇತು ನಿಂತುಹೋದಂತೆಯೇ ಎಂದು ಭಾವಿಸಬಹುದು.

ನಜರುಲ್‌ಗೆ ವಿಧಿಸಲಾಗಿದ್ದ ಕಾರಾವಾಸದಲ್ಲಿ ಮಾಫಿಯಾದ ಅವಧಿಯನ್ನು ಲೆಕ್ಕಕ್ಕೆ ಹಿಡಿದು ಜನವರಿ 16 ರಿಂದ ಡಿಸೆಂಬರ 23 ರ ವರೆಗೆ 1923ರ ವರ್ಷವನ್ನು ಪೂರ್ತಿಯಾಗಿ ಅವನು ಜೈಲಿನಲ್ಲಿ ಕಳೆದನು. ಅದೇ ವರ್ಷದಲ್ಲಿ ಇನ್ನೂ ಅನೇಕ ಸ್ಮರಣೀಯವಾದ ಘಟನೆಗಳು ನಡೆದವು. ನಜರುಲ್ ಕಾವ್ಯಸಂಗ್ರಹಗಳಲ್ಲಿ ಮೊದಲನೆಯ ದಾಗಿ ಚಿರಸ್ಮರಣೀಯವಾದ 'ಅಗ್ನಿವೀಣಾ' ಇದೇ ವರ್ಷದಲ್ಲಿ ಪ್ರಕಟವಾಯಿತು. ಅಲ್ಪಕಾಲದಲ್ಲಿಯೇ ಅದರ ಎರಡನೆಯ ಆವೃತ್ತಿಯೂ ಹೊರಬಂದಿತು. ನಜರುಲ್ ತನ್ನ ಮಟ್ಟಿಗೆ ಪರಮೋತ್ಕರ್ಷವೆಂದು ಭಾವಿಸಿದ ಘಟನೆ ಎಂದರೆ ರವೀಂದ್ರನಾಥ ಟಾಗೋರರು ತಮ್ಮ ಹೊಸ ಗೀತನಾಟಕ 'ವಸಂತ'ವನ್ನು "ಶ್ರೀಮಾನ್ ಕಾಜಿ ನಜರುಲ್ ಇಸ್ಲಾಮರಿಗೆ ಪ್ರೀತಿಯುತ ಆಶೀರ್ವಾದಗಳೊಡನೆ" ಅರ್ಪಣೆ ಮಾಡಿದ್ದು. ಟಾಗೋರರ ಈ ಹರಕೆ ಅರ್ಥಪೂರ್ಣವಾಗಿತ್ತು. ಅದು ಅವರ ಮನೋವೈಶಾಲ್ಯದ ಮತ್ತು ಗುಣಗ್ರಾಹಿತೆಯ ದ್ಯೋತಕವಾಗಿತ್ತು. ನಜರುಲ್‌ಗೆ ಮಿತಿ ಇಲ್ಲದ ಕೃತಜ್ಞತೆ ಆನಂದಗಳುಂಟಾದವು. ತನ್ನ ಜನಾಂಗದ ಆತ್ಮಸಾಕ್ಷಿಯಾಗಿದ್ದ ರವೀಂದ್ರನಾಥರು ಧೂಮಕೇತು ಖ್ಯಾತಿಯ ನಜರುಲ್‌ಗೆ ಕೊಡಮಾಡಿದ ಈ ಗೌರವವೆಂದರೆ ಸಮಸ್ತ ರಾಷ್ಟ್ರವೇ ಅವನಿಗೆ ಇತ್ತ ಗೌರವವೆಂಬದು ನಿರ್ವಿವಾದವಾಗಿತ್ತು. ಇದರ ಅಂತರಾರ್ಥವನ್ನು ಸರಿಯಾಗಿ ತಿಳಿಯಬೇಕಾದರೆ ಅಂದು ದೇಶದಲ್ಲಿ ನಡೆದಿದ್ದ ರಾಜಕೀಯ ಆಂದೋಲನವು ಗುರುದೇವನಿಗೆ ಅಷ್ಟಾಗಿ ರುಚಿಸಿದ್ದಿಲ್ಲವೆಂಬದನ್ನೂ ತಿಳಿದಿರಬೇಕು.

ಅಸಹಕಾರ, ಚರಖಾ, ವಿದೇಶಿ ಬಟ್ಟೆಗೆ ಬಹಿಷ್ಕಾರ, ಪಾಶ್ಚಿಮಾತ್ಯ ಶಿಕ್ಷಣಕ್ಕೆ ಬಹಿಷ್ಕಾರ, ಇಂತಹ ಚಳುವಳಿಗಳ ಬಗೆಗೆ ಗಾಂಧೀಜಿಯವರ ನಿಲುವು ತನಗೆ ಒಪ್ಪಿಗೆ ಯಿಲ್ಲವೆಂದು ಟಾಗೋರ ಬಹಿರಂಗವಾಗಿ ಹೇಳಿದ್ದರು. ಅಂದಮೇಲೆ ನಜರುಲ್‌ನ ಬಂಡಾಯ ಕ್ರಾಂತಿಗಳ ಮಾತುಗಳು ಅವರಿಗೆ ಒಪ್ಪಿಗೆಯಾಗುವ ಸಂಭವವಿರಲಿಲ್ಲ. ಟಾಗೋರರು 1908 ರಷ್ಟು ಹಿಂದೆಯೇ 'ಸ್ವದೇಶಿಸಮಾಜ' ಎಂಬ ಅವರ ಸುಪ್ರಸಿದ್ಧ ಭಾಷಣದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನೇ ಅವರು ಇನ್ನೂ ಬಲವಾಗಿ ಸಮರ್ಥಿಸುತ್ತಿದ್ದರು. ಅದರಲ್ಲಿ ಅವರು ರೂಪಿಸಿದ್ದ ಸಾಮಾಜಿಕ ನವನಿರ್ಮಾಣ ಮತ್ತು ರಾಷ್ಟ್ರೀಯ ಪುನರುತ್ಥಾನಗಳ ಕಾರ್ಯಕ್ರಮವು ಸ್ವಯಂಪೂರ್ಣವಾಗಿತ್ತು. ಆ ಮಾದರಿಯ ನಿಧಾನವಾಗಿ ತಾಳ್ಮೆಯಿಂದ ನಡೆಸಿಕೊಂಡು ಹೋಗಬೇಕಾದ

ಕಾರ್ಯಕ್ರಮವು ಬಿರುಗಾಳಿಯಂತಹ ನಜರುಲ್‌ನ ಮನೋಭಾವಕ್ಕೆ ತೀರಾ ವ್ಯತಿರಿಕ್ತವಾಗಿತ್ತು. ಈ ಮೊದಲೇ ಕವಿಗಳಿಬ್ಬರೂ ಒಬ್ಬರನ್ನೊಬ್ಬರು ಕಂಡಿದ್ದರು ಮತ್ತು ತಮ್ಮತಮ್ಮ ಅಭಿಪ್ರಾಯಗಳನ್ನು ಬದಲಿಸಿಕೊಳ್ಳುವದು ಬೇಕಿಲ್ಲವೆಂದು ಒಪ್ಪಿದ್ದರೆಂದು ತಿಳಿಯುತ್ತದೆ. ಆಗಲೂ ಟಾಗೋರರು ನಜರುಲ್‌ನ ಕವಿ ಹೃದಯಕ್ಕೂ ಗಾನ ಮಾಧುರ್ಯಕ್ಕೂ ಮನಸೋತಿದ್ದರೆಂದು ಹೇಳುತ್ತಾರೆ. ನಜರುಲ್‌ನು ರಾಜಕೀಯ ಆಂದೋಲನಗಳಿಗೆ ಮನಸುಹಾಕುವದರ ಬದಲಾಗಿ ಸಾಹಿತ್ಯದ ಕಡೆಗೆ ಮನಸುಗೊಡಬೇಕೆಂದೂ ತನ್ನಲ್ಲಿ ನೈಸರ್ಗಿಕವಾಗಿದ್ದ ಪ್ರತಿಭೆಯನ್ನು ಶಾಂತಿನಿಕೇತನ ದಲ್ಲಿ ಅಧ್ಯಯನದಿಂದ ಪರಿಷ್ಕರಿಸಿ ಬೆಳೆಯಿಸಿಕೊಳ್ಳಬೇಕೆಂಬದೂ ಅವರ ಬಯಕೆ ಯಾಗಿತ್ತು. ಅದು ನಜರುಲ್ ಮನಸಿಗೆ ಬರಲಿಲ್ಲ. ಆಂದೋಲನದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವದೇ ಅವನಿಗೆ ಇಷ್ಟವಾಗಿತ್ತು. ಇದರಿಂದ ಟಾಗೋರರಿಗೆ ವಿಷಾದ ವೆನಿಸಿತು. ದೇವದತ್ತವಾಗಿದ್ದ ಪ್ರತಿಭೆಯನ್ನು ನಜರುಲ್ ದುರುಪಯೋಗಪಡಿಸುತ್ತಿದ್ದ ನೆಂದು ಅವರು ಭಾವಿಸಿದರು. ತಮ್ಮದೇ ಆದ ಉದಾರವಾದ ಕಟುಕಿಯಿಂದ ಅವರು ನಜರುಲ್ ಮಾಡುತ್ತಿದ್ದದ್ದು 'ತಲವಾರ ದಿಏ ದಾರಿ ಛಾನಛಾ' (ಖಡ್ಗದ ಮೊನೆ ಯಿಂದ ಗಡ್ಡ ಬೋಳಿಸಿಕೊಳ್ಳುವದು) ಎಂದರು. ಅವರಿಬ್ಬರ ಸಂಬಂಧಗಳು ಹೀಗಿದ್ದಿರುವಾಗ ಜೇಲಿನಲ್ಲಿ ಕೊಳೆಯುತ್ತಿದ್ದ ನಜರುಲ್‌ನ ಗುಣಗಳನ್ನು ಟಾಗೋರರು ಗೌರವಿಸಿದ್ದು ಬಂಗಾಲದ ಜನರಿಗೆ ಸಂತೋಷಕ್ಕೆ ಕಾರಣವಾಯಿತು, ಮತ್ತು ಅಂದಿನ ಸರಕಾರದ ಕೃತಿಗಳು ಇನ್ನೂ ಹೆಚ್ಚಾಗಿಯೇ ಅರ್ಥವಿಲ್ಲದವು, ಮೂರ್ಖತನ ದವು, ಎಂದು ತೋರಿಸುವಂತಾಯಿತು.

ಇಂತಹ ಸನ್ನಿವೇಶವನ್ನು ಎದುರಿಸುವುದಕ್ಕೆ ನೌಕರಶಾಹಿ ತನ್ನದೇ ಒಂದು ದಾರಿಯನ್ನು ಕಂಡುಕೊಂಡಿತ್ತು. ಅವರ ಪಾಲಿಗೆ ನಜರುಲ್ ಒಬ್ಬ ಕೈದಿ, ರಾಜ ದ್ರೋಹಿ, ಅವನಂಥವರನ್ನು ಹೇಗೆ ಮಣಿಸಬೇಕೆಂಬದು ಅವರಿಗೆ ತಿಳಿಯದೆ! ಹಾಗೆಯೇ ನಜರುಲ್ ಕೂಡ ಅವರನ್ನು ಹೀಗೆ ಎದುರಿಸಬೇಕೆಂಬದನ್ನು ಯೋಚಿಸಿ ದ್ದನು. ಅವನು ಮಾಡಿದ ಅಪರಾಧ ಮತ್ತು ಅವನ ಸಾಮಾಜಿಕ ದರ್ಜೆಯನ್ನು ಗಮನಿಸಿದ್ದರೆ ಅವನಿಗೆ ಸ್ಪೆಶಲ್‌ಕ್ಲಾಸ ಕೈದಿಯ ಸೌಲಭ್ಯಗಳು ದೊರೆಯಬೇಕೆಂಬದು ಜೈಲಿನ ಕಾನೂನಾಗಿತ್ತು. ಆ ಸೌಲಭ್ಯಗಳು ಉಳಿದ ರಾಜಕೀಯ ಕೈದಿಗಳಿಗೆ ದೊರೆಯುವಂತಿರಲಿಲ್ಲ. ಈಗ ನಜರುಲ್‌ನನ್ನೂ ಅಲಿಪೂರ ಸಂಟ್ರಲ್ ಜೈಲಿನಿಂದ ಹೂಗಲಿ ಡಿಸ್ಟ್ರಿಕ್ಟ ಜೈಲಿಗೆ ವರ್ಗಾಯಿಸಿ ಅವನ ಸೌಲಭ್ಯಗಳನ್ನು ಕಸಿದುಕೊಳ್ಳ ಲಾಯಿತು. ಹೂಗಲಿ ಜೈಲಿನಲ್ಲಿ ಅನ್ಯಾಯವಾಗಿ ಅವನನ್ನೂ ಉಳಿದ ಕಾಂಗ್ರೆಸ್ ಕೈದಿಗಳನ್ನೂ ಸಾಮಾನ್ಯ ಅಪರಾಧಿಗಳೊಡನೆ ಕೂಡಿಹಾಕಲಾಯಿತು. ನಜರುಲ್‌ನೂ ಅವನ ಜತೆಯವರೂ ಇದಕ್ಕೆ ಪ್ರತಿಭಟಿಸಿದರು. ಅವರ ಸೌಲಭ್ಯಗಳನ್ನು ಮತ್ತೂ ಮೊಟಕುಮಾಡಿದರು. ಸವಿನಯ ಕಾಯದೇ ಭಂಗವನ್ನು ನಜರುಲ್ ಮತ್ತು ಸಂಗಡಿಗರು ಆರಂಭಿಸಿದರು. ಅಧಿಕಾರಿಗಳು ಅವರನ್ನು ಇನ್ನೂ ಕ್ರೂರವಾಗಿ ದಂಡಿಸಿದರು—ಆಹಾರದಲ್ಲಿ ದಂಡನೆ, ಬಟ್ಟೆಕೊಡುವುದರಲ್ಲಿ ದಂಡನೆ, ಹೆಚ್ಚಿನ ಶ್ರಮದ ಕೆಲಸಗಳು, ದಂಡಾಬೇಡಿಗಳು, ಅಡ್ಡ ದಂಡಾ ಬೇಡಿಗಳು, ಇತ್ಯಾದಿ, ಒಂದರ

ಹಿಂದೊಂದಾಗಿ ಇಂತಹ ಪೀಡೆಗಳು ಹೆಚ್ಚಾಗಲು ನಜರುಲ್‌ನೂ ಅವನ ಸಂಗಡಿಗರೂ ಈ ಭಯದ ದಬ್ಬಾಳಿಕೆಯನ್ನು ಪ್ರತಿಭಟಿಸಿ ಉಪವಾಸ ಸತ್ಯಾಗ್ರಹವನ್ನು ಹೂಡಿದರು.

ಉಪವಾಸದ ದಿನಗಳು ಒಂದೊಂದಾಗಿ ಸರಿದವು. ವಾರಗಳೂ ಸರಿದವು. ಜೈಲಿನ ಹೊರಗಡೆ ಜನತೆಯಲ್ಲಿ ಕಳವಳ ಹೆಚ್ಚಾಯಿತು. ಉಪವಾಸವನ್ನು ಕೊನೆಗೊಳಿಸುವದಕ್ಕೆ ಅವನ ಪ್ರೀತಿಯ ಗೆಳೆಯರೇ ಹೇಳಿಕೊಂಡರೂ ಅವನು ಜಗ್ಗಲಿಲ್ಲ. ಅವನು ಆದರಿಸುತ್ತಿದ್ದ ರಾಷ್ಟ್ರನಾಯಕರೇ ಹೇಳಿದರೂ ಕೇಳಲಿಲ್ಲ. ಇದು ಶಿಲಾಂಗಿನಲ್ಲಿದ್ದ ಟಾಗೋರರಿಗೆ ತಿಳಿದು ಅವರು ತಂತಿಯನ್ನು ಕಳಿಸಿದರು—"ಉಪವಾಸವನ್ನು ಬಿಡು, ನಮ್ಮ ಸಾಹಿತ್ಯಕ್ಕೆ ನೀನು ಕೊಡಬೇಕಾದದ್ದು ಇನ್ನೂ ಇದೆ." ಈ ತಂತಿಯು ನಜರುಲ್‌ಗೆ ತಲುಪಲೇ ಇಲ್ಲ. ಅಧಿಕಾರಿಗಳು ಅದರ ಮೇಲೆ "ವಿಳಾಸದಾರನು ಸಿಕ್ಕಲಿಲ್ಲ" ಎಂದು ಬರೆದು ತಿರುಗಿ ಕಳಿಸಿದರು. ಆ ಮೇಲೆ ದೇಶಬಂಧು ಚಿತ್ತರಂಜನದಾಸರೂ ಕಾದಂಬರಿಕಾರ ಶರಚ್ಚಂದ್ರ ಚಟ್ಟೋಪಾಧ್ಯಾಯರೂ ಕೂಡಿ ಕಲಕತ್ತೆಯಲ್ಲಿ ದೊಡ್ಡದೊಂದು ಸಾರ್ವಜನಿಕ ಸಭೆ ಸೇರಿಸಿದರು. ಕೈದಿಗಳ ಪರವಾಗಿ ಬಂಗಾಲದ ಜನತೆ ಎಲ್ಲ ಒಂದಾಗಿ ಹೋರಾಡುವದೆಂದೂ ಕೈದಿಗಳು ಉಪವಾಸದ ಹೋರಾಟವನ್ನು ಮುಂದರಿಸಬೇಕಿಲ್ಲವೆಂದೂ ಆ ಸಭೆಯು ಆಶ್ವಾಸನ ಕೊಟ್ಟಿತು. ಇಂತಹದೇ ಒಂದು ಆಶ್ವಾಸನ ಮತ್ತೆ ಟಾಗೋರರಿಂದಲೂ ಬಂದಿತು. ಅಂತೂ ಉಪವಾಸ ಸತ್ಯಾಗ್ರಹವೊಮ್ಮೆ ಕೊನೆಗೊಂಡಿತು. ಜೈಲಿನ ಅಧಿಕಾರಿಗಳಿಗೂ ಸಾಕಾಗಿತ್ತು. ಇವರೊಡನೆ ಏಗುವದು ಬೇಡವೆಂದು ಜೈಲ ಅಧಿಕಾರಿಗಳು ಅವರನ್ನು ಹೂಗಲಿ ಜೈಲಿನಿಂದ ಬರಹಾಂಪೂರ ಜೈಲಿಗೆ ವರ್ಗಾಯಿಸಿ ಅವರು ಕೇಳಿದ ಹೆಚ್ಚಿನ ದರ್ಜೆಯ ಸೌಲಭ್ಯಗಳನ್ನು ಕೊಟ್ಟರು. ಅಂತೂ ನಜರುಲ್‌ನ ಹನ್ನೊಂದು ತಿಂಗಳ ಜೈಲುವಾಸ 1923 ಡಿಸೆಂಬರ 15 ನೆಯ ದಿನ ಒಂದು ವಿಧವಾಗಿ ಶಾಂತರೀತಿಯಿಂದಲೇ ಕೊನೆಗೊಂಡಿತು. ಇದರ ಶಾಶ್ವತವಾದ ಸ್ಮಾರಕ ಬಂಗಾಲಿ ಸಾಹಿತ್ಯದಲ್ಲಿ ಉಳಿದಿದೆ. ಆಗ ಹುಲುಸಾಗಿ ಬೆಳೆದ ಹಾಡು ಕವಿತೆಗಳಲ್ಲಿ 'ಸುಪೇರ ಬಂದನಾ' (ಸೂಪರಿಂಟೆಂಡಂಟರಿಗೆ ನಮಸ್ಕಾರ) ಎಂಬ ನಿಂದಾಸ್ತುತಿಯು ಕಟಿತ ಕ್ರೂರವಾಗಿದೆ. 'ಶಿಕಲ ಪರಾರ ಗಾನ' (ಬೇಡಿಗಳನ್ನು ಕಟ್ಟಿಕೊಂಡಿರುವವರ ಹಾಡು) ಎಂಬ ಹಾಡಿನ—

"ಏಇ ಶಿಕಲ ಪರಾ ಛಲ ಆಮಾದೇರ ಶಿಕಲ ಪರಾ ಛಲ" (ನಾವು ಹೊತ್ತಿರುವ ಈ ಸರಪಣಿಗಳು ಬರಿಯ ನೋಟಕಾಗಿ. ಅವನೆ ಹೊತ್ತು ನಾವ್ ದಿಗಿಲುಗೊಳಿಸುವೆವು ಹೊರಿಸಿದವರನೆಲ್ಲ) ಎಂಬ ಸಾಲುಗಳನ್ನು ಅಂದು ಹಾಡದವರೇ ಇರಲಿಲ್ಲ.

# 4. ಜನತೆಯ ಕವಿ

'ಕಲ್ಲಗೋಡೆಗಳೆಲ್ಲ ಬಂಧನಗಳಲ್ಲ' ಎಂಬ ಮಾತು ಸನ್ 1923ನೆಯ ವರ್ಷವೆಲ್ಲವೂ ನಜರುಲ್ ವಿಷಯದಲ್ಲಿ ಸತ್ಯವಾಗಿತ್ತು. ಅವನು ಜೈಲಿನಲ್ಲಿದ್ದರೂ ಅವನು ಬರೆಯುತ್ತಿದ್ದ ಹಾಡುಗಳೂ ಕವಿತೆಗಳೂ ಹೇಗೋ ಹೊರಗೆ ಬಂದು ಬಂಗಾಲಿ ಪತ್ರಿಕೆಗಳ ದ್ವಾರಾ ಓದುಗರನ್ನು ತಲುಪುತ್ತಿದ್ದವು. ಇಷ್ಟೇ ಅಲ್ಲ, ಮೊದಲಿಗಿಂತಲೂ ಅವನ್ನು ಓದುವವರ ಸಂಖ್ಯೆ ಹೆಚ್ಚಾಗಿತ್ತು. ಹೂಗಲಿ ನಗರದಲ್ಲಿ ಜೇಲಿನ ಹೊರಗಡೆಯಲ್ಲಿ ಅವನ ಮಿತ್ರರ ಮತ್ತು ಮೆಚ್ಚಿದವರ ಸಂಖ್ಯೆ ಬೆಳೆಯುತ್ತಲೇ ಇತ್ತು, ಮತ್ತು ಅವರ ಮುಖಾಂತರವಾಗಿ ನಜರುಲ್‌ಗೂ ಕಲಕತ್ತೆಯಲ್ಲಿಯ ಅವನ ಮಿತ್ರರಿಗೂ ಸಂಪರ್ಕ ನಡೆಯುತ್ತಿದ್ದಿತು. ಜೈಲಿನಿಂದ ನಜರುಲ್ ಬಿಡುಗಡೆಯಾದ ಕೂಡಲೆ ಹೂಗಲಿಯಲ್ಲಿಯ ಅವನ ಮಿತ್ರರು ಅದೇ ನಗರದಲ್ಲಿ ನೆಲಸುವಂತೆ ಅವನನ್ನು ಒತ್ತಾಯಿಸಿದರು. ಸನ್ 1924-25 (2 ಜನವರಿ 1926ರ ವರೆಗೆಂದು ತೋರುತ್ತದೆ) ಎರಡು ವರ್ಷಗಳನ್ನು ನಜರುಲ್ ಹೂಗಲಿಯಲ್ಲಿಯೇ ಕಳೆದನು.

ಜೈಲಿನಿಂದ ಬಿಡುಗಡೆಯಾದ ತರುವಾಯದಲ್ಲಿ ರಾಜಕೀಯದಲ್ಲಿ ನಜರುಲ್ ಉತ್ಸಾಹ ಇನ್ನೂ ಹೆಚ್ಚಾಯಿತು. ರಾಜಕೀಯ ಮತ್ತು ಸಾಹಿತ್ಯ ವಿಷಯಗಳಲ್ಲಿ ಆಸಕ್ತಿಯುಳ್ಳವರ ಸಭೆ ಸಮಾರಂಭಗಳು ಬಂಗಾಲದಲ್ಲೆಲ್ಲ ಆಗಾಗ ನಡೆಯುತ್ತಲೇ ಇದ್ದವು. ಅವುಗಳಿಗೆಲ್ಲ ನಜರುಲ್ ಬರಬೇಕೆಂಬ ಆ ಜನಗಳ ಬಯಕೆ ಸಹಜವಾಗಿತ್ತು. ಆಗ ರಾಜಕೀಯ ಚಳುವಳಿ ಇಳಿತರದಲ್ಲಿತ್ತು ಮತ್ತು ಅದರಿಂದಾಗಿಯೇ ವಿವಾದಗಳು ಹೆಚ್ಚಾಗಿದ್ದವು. ರಾಷ್ಟ್ರೀಯ ಹೋರಾಟವನ್ನು ಮುಂದರಿಸುವದಕ್ಕೆ ಹೊಸ ಹೊಸ ಮಾರ್ಗಗಳನ್ನು ಶೋಧಿಸುವ ಯತ್ನ ನಡೆಯುತ್ತಿತ್ತು. ತುಂಬುವೇಗದಿಂದ ಓಡುತ್ತಿದ್ದ ಯಂತ್ರವನ್ನು ಬಾರಡೋಲಿ ನಿರ್ಣಯವು ಗಕ್ಕನೆ ನಿಲ್ಲಿಸಿದಂತಾಗಿತ್ತು. ಅಂತಹ ಯಂತ್ರವನ್ನು ನಿಧಾನವಾಗಿ ಚಲಿಸುವ ವಿಧಾಯಕ ಕಾರ್ಯಕ್ರಮಕ್ಕೆ ಹೂಡುವದು ಸುಲಭವಾಗಿರಲಿಲ್ಲ. ಜನಪ್ರಿಯವಾಗಿದ್ದ ಆಂದೋಲನ ಕುಸಿಯಿತು. ಇದು ಹೀಗಾಗಬಹುದೆಂಬುದನ್ನು ದೇಶಬಂಧು ದಾಸ, ಮೋತಿಲಾಲ ನೆಹರೂ ಮೊದಲಾದ ಮುಂದಾಳುಗಳು ಮೊದಲೇ ಕಂಡಿದ್ದರು. ಈ ಗ್ಲಾನಿ ಕವಿಯುತ್ತಿದ್ದಂತೆಯೇ ಬ್ರಿಟಿಶ ಆಳರಸರು ತಮ್ಮ ದುಷ್ಟಯೋಜನೆಗಳಿಗನುಸಾರವಾಗಿ ಗಾಂಧೀಜಿಯನ್ನು ರಂಗದಿಂದ ಸೆಳೆದುಕೊಂಡು ಹೋಗಿ ಜೈಲಿನಲ್ಲಿಟ್ಟರು. ರಾಜದ್ರೋಹದ ಆಪಾದನೆಗಾಗಿ ಅವರಿಗೆ ಆರು ವರ್ಷ ಕಠಿಣಶಿಕ್ಷೆಯನ್ನು ವಿಧಿಸಲಾಗಿತ್ತು.

ಬಿಡುಗಡೆ ಪಡೆದುಬಂದ ಸಿ. ಆರ್. ದಾಸ, ಮೋತಿಲಾಲ ನೆಹರೂ ಮುಂತಾ

ದವರು ಅಸಹಕಾರ ಚಳುವಳಿಯನ್ನು ಬದಲಿಸಬೇಕೆಂದರು. 'ಜವಾಬುದಾರಿಯಿಲ್ಲದ' ಸರಕಾರವನ್ನು ಎದುರಿಸುವ ಉದ್ದೇಶದಿಂದಲೇ ವಿಧಾನಮಂಡಲಗಳನ್ನು ಪ್ರವೇಶಿಸ ಬೇಕೆಂದೂ, ಅವುಗಳೊಳಗಿಂದಲೇ ಅಸಹಕಾರವನ್ನು ಮುಂದರಿಸಬೇಕೆಂದೂ ಅವರು ವಾದಿಸಿದರು. ಆದರೆ ಕಾಂಗ್ರೆಸ ಮುಂದಾಳುಗಳಲ್ಲಿ ಬಹುಸಂಖ್ಯಾಕರು ಇದನ್ನು ವಿರೋಧಿಸಿದರು. "ಬದಲಾವಣೆಯನ್ನು ಒಪ್ಪದ"ವರ ಈ ಗುಂಪಿಗೆ ಸಿ. ರಾಜ ಗೋಪಾಲಾಚಾರಿಯವರು ಮುಖ್ಯರಾಗಿದ್ದರು. ಈ ಎರಡು ಗುಂಪುಗಳ ವಿವಾದ ಎಲ್ಲಿಯವರೆಗೆ ಬೆಳೆಯಿತೆಂದರೆ ದಿಸೆಂಬರ 1922 ರಲ್ಲಿ ಗಯಾ ಕಾಂಗ್ರೆಸಿಗೆ ಅಧ್ಯಕ್ಷ ರಾಗಿದ್ದ ಸಿ. ಆರ್. ದಾಸರು ಆ ಪದಕ್ಕೆ ರಾಜೀನಾಮೆಯನ್ನಿತ್ತು "ಕಾಂಗ್ರೆಸ್ ಸ್ವರಾಜ್ಯ ಪಾರ್ಟಿ"ಯನ್ನು ಸ್ಥಾಪಿಸಿದರು. "ಬದಲಾವಣೆಯನ್ನು ಒಪ್ಪಿದ"ವರೆಂದು ಹೆಸರು ಪಡೆದ ಮೋತೀಲಾಲ ನೆಹರೂ, ಹಕೀಮ ಅಜಮಲಖಾನ ಮುಂತಾದವರು ಈ ಸ್ವರಾಜ್ಯ ಪಾರ್ಟಿಗೆ ಸೇರಿದರು. ಇವರು ಕಾಂಗ್ರೆಸ ಸಂಸ್ಥೆಯ ಒಂದು ಅಂಗವಾಗಿಯೇ ಇದ್ದು ಉಳಿದ ಕಾಂಗ್ರೆಸ ಕಾರ್ಯಕರ್ತರ ಮತ್ತು ಹೊರಗಿನವರ ಬೆಂಬಲವನ್ನು ಪಡೆಯಲು ಯತ್ನಿಸಿದರು.

ಆ ಕಾಲವು (1923) ರಾಷ್ಟ್ರಕ್ಕೆ ಗೊಂದಲದ ಮತ್ತು ಕಟುವಾದ ನಿರಾಶೆಯ ಕಾಲವಾಗಿತ್ತು. ವಿಧಾಯಕ ಕಾರ್ಯಕ್ರಮವು ಹೇಳಿಕೊಳ್ಳುವಂತಹ ಸಾಫಲ್ಯವನ್ನು ಗಳಿಸಿದ್ದಿಲ್ಲ. ಹೋರಾಟದಲ್ಲಿ ತೊಡಗಿದ್ದವರು ಪಕ್ಷೋಪಪಕ್ಷಗಳಾಗಿ ಚದರಿ ಹೋಗಿದ್ದರು. ಕೊನೆಗೆ ಮೌಲಾನಾ ಮಹಮ್ಮದ ಅಲಿಯವರ ಪ್ರಯತ್ನದಿಂದಾಗಿ ಕಾಂಗ್ರೆಸಿನಲ್ಲಿಯ ವಿವಾದವು ಕೊನೆಗೊಂಡು ಕಾಂಗ್ರೆಸಿನ ದಿಲ್ಲಿಯ ವಿಶೇಷ ಅಧಿವೇಶನ ದಲ್ಲಿ ಸ್ವರಾಜ್ಯ ಪಾರ್ಟಿಯವರು ತಮ್ಮ ಹೆಸರಿನಲ್ಲಿಯೇ ತಮ್ಮ ಜವಾಬುದಾರಿಯ ಮೇಲೆಯೇ ಚುನಾವಣೆಗಳಲ್ಲಿ ಸ್ಪರ್ಧಿಸಬಹುದೆಂದು ಒಪ್ಪಲಾಯಿತು. ಕಾಂಗ್ರೆಸಿನ ಹೆಸರನ್ನಾಗಲಿ ಅದರ ಸಾಧನ ಸಂಪತ್ತಿಗಳನ್ನಾಗಲಿ ಈ ಸ್ಪರ್ಧೆಗೆ ಬಳಸಕೂಡದೆಂದು ಕಟ್ಟು ಮಾಡಲಾಯಿತು.

ಸ್ವರಾಜ್ಯ ಪಾರ್ಟಿಯವರಿಗೆ ಇಷ್ಟು ಸಾಕಾಗಿತ್ತು. ಅವರಿಗೆ ಸಾಕಷ್ಟು ಜನತೆಯ ಬೆಂಬಲ ದೊರೆಯಿತು ಏಕೆಂದರೆ ಅವರ ಕಾರ್ಯಕ್ರಮದಲ್ಲಿ ಜನರ ಕಣ್ಣಿಗೆ ಕಾಣ ಬರುವಂತಹ ಅವರ ಉತ್ಸಾಹವನ್ನು ಪ್ರಚೋದಿಸುವಂತಹ ಚಟುವಟಿಕೆಗಳಿದ್ದವು. ಸ್ವರಾಜ್ಯಕ್ಕಾಗಿ ಹೂಡಲಾಗಿದ್ದ ಹೋರಾಟದಲ್ಲಿ ಈ ಸ್ವರಾಜ್ಯ ಪಾರ್ಟಿಯವರು ಯಾವ ದೊಡ್ಡ ಸಾಧನೆಯನ್ನು ಮಾಡಿದರೆಂದು ಹೇಳುವಂತಿರಲಿಲ್ಲ. ಬಾರಡೋಲಿಯ ನಿರ್ಣಯವು ಬಹುಜನರಲ್ಲಿ ಉದಾಸೀನತೆಯನ್ನು ಹರಡಿದಾಗ ಈ ಸ್ವರಾಜ್ಯ ಪಾರ್ಟಿಯ ಕಾರ್ಯಕ್ರಮವು ಕೆಲಮಟ್ಟಿಗೆ ರಾಜಕೀಯ ಜಾಗ್ರತಿಯನ್ನು ಕಾಯ್ದು ಕೊಂಡಿದ್ದೆಷ್ಟೊ ಅಷ್ಟೇ. ನಿಜವಾದ ಹೋರಾಟ ಮುಂದೆ 1930 ರಲ್ಲಿ ಬರುವದಿತ್ತು.

ಅಂತೂ 1924 ಸ್ವರಾಜ ಪಾರ್ಟಿಯ ಚಟುವಟಿಕೆಗಳ ಆರಂಭವನ್ನು ಕಂಡಿತು. ಕಟ್ಟಾ ಗಾಂಧೀವಾದಿಗಳಾಗಿ "ಬದಲಾವಣೆಯನ್ನು ಒಪ್ಪದವ"ರೆಂದುಕೊಂಡು ತಟಸ್ಥರಾಗಿ ಇರುವದಕ್ಕಿಂತ ಅಸಹಕಾರದ ಬೇರೆ ಹಾದಿಗಳನ್ನು ಹುಡುಕುವದಕ್ಕೆ ಈ ಪಕ್ಷವು ಆಸ್ಪದವನ್ನುಂಟುಮಾಡಿತು. ಧೂಮಕೇತುವಿನ ಕವಿ ಬಂಡುಗಾರ ನಜರುಲ್

ನಿಗೆ ತಟಸ್ಥತೆ ಸಹನವಾಗುತ್ತಿರಲಿಲ್ಲ. ಬದಲಾವಣೆಯ ಪಕ್ಷದಲ್ಲಿಯೇ ಅವನಿಗೆ ಹೆಚ್ಚಿನ ಚಟುವಟಿಕೆ ಕಂಡು ಬಂದದ್ದರಿಂದ ಅವರ ಪರವಾಗಿಯೇ ಅವನು ಆಂದೋಲನ ಕ್ಕಿಳಿದನು. ಜೈಲಿನಿಂದ ಬಿಡುಗಡೆಯಾದ ಕೂಡಲೇ ಅವನು ಜಿಲ್ಲೆಯಿಂದ ಜಿಲ್ಲೆಗೆ ಸುತ್ತಾಡುತ್ತ ರಾಜಕೀಯ ಮತ್ತು ಸಾಹಿತ್ಯಕ ಸಭೆ ಸಮ್ಮೇಳನಗಳಲ್ಲಿ ಭಾಗವಹಿಸ ತೊಡಗಿದನು. ಇದೇ ಕಾಲದಲ್ಲಿ ಅವನು ಹೊಸ ಹೊಸ ಹಾಡುಗಳನ್ನೂ ಕವಿತೆಗಳನ್ನೂ ರಚಿಸುತ್ತಲೇ ಇದ್ದನು. ಇವು ಸಾಹಿತ್ಯ ಪ್ರಪಂಚದಲ್ಲಿ ನ್ಯಾಯವಾಗಿಯೇ ಉನ್ನತ ವಾದ ಸ್ಥಾನವನ್ನು ಪಡೆದಿವೆ. ಇವುಗಳ ಸ್ಫೂರ್ತಿ ಹೆಚ್ಚಾಗಿ "ಜಾನಪದಿಕ"ವಾಗಿತ್ತು ಅಂದರೆ ಸಭೆ ಸಮ್ಮೇಳನಗಳಲ್ಲಿ ಜನರು ಸೇರುವ ವಿಶೇಷ ಸಂದರ್ಭಗಳಿಗಾಗಿಯೇ ಇವುಗಳನ್ನು ರಚಿಸಲಾಗಿತ್ತು. ಮುಂದೆಯೂ ಇವುಗಳ ವಿಚಾರವಾಗಿ ಇನ್ನೂ ಹೇಳುವುದಿದೆ.

ಇದೇ ಕಾಲದಲ್ಲಿ ನಜರುಲ್‌ನ ವ್ಯಕ್ತಿಗತ ಜೀವನದಲ್ಲಿ ನಡೆದ ಕೆಲವು ಮಹತ್ವದ ಘಟನೆಗಳನ್ನೂ ಗಮನಿಸುವದು ಅವಶ್ಯವಿದೆ- ಏಕೆಂದರೆ ಅವನ ಜೀವನದಲ್ಲಿ ಇವುಗಳ ಪ್ರಭಾವ ಕೂಡಾ ಸಾರ್ವಜನಿಕ ಘಟನೆಗಳಷ್ಟೇ ಇಲ್ಲವೆ ಸ್ವಲ್ಪ ಹೆಚ್ಚಾಗಿಯೇ ಕಂಡು ಬರುವದು ಸಹಜವಾಗಿತ್ತು. ಇವುಗಳಲ್ಲಿ ಮುಖ್ಯವಾದದ್ದು ಅವನ ಮದುವೆ (ಏಪ್ರಿಲ್ 1924).

ನಜರುಲ್ ಆಗಾಗ್ಗೆ ಕೋಮಿಲ್ಲದಲ್ಲಿ ಸೇನಗುಪ್ತರ ಮನೆಗೆ ಹೋಗುತ್ತಿದ್ದ ನೆಂಬದನ್ನು ಈ ಮೊದಲೇ ಹೇಳಿಯಾಗಿದೆ. ಮೊದಲೊಮ್ಮೆ ಅಕಸ್ಮಾತ್ತಾಗಿಯೇ ಅವನು ಅಲ್ಲಿ ಇರಬೇಕಾಗಿ ಬಂದಾಗ ಆ ಮನೆಯೊಡತಿ ವಿರಾಜಸುಂದರೀದೇವಿಯ ಸ್ನಿಗ್ಧ ಸ್ವಭಾವದಿಂದಾಗಿ ಅವನಿಗೆ ತನ್ನ ಮನೆಯಲ್ಲಿಯೇ ತಾಯಿಯ ಪ್ರೀತಿ ಆಶ್ರಯ ಗಳನ್ನು ಕಂಡಂತೆ ಭಾವನೆಯುಂಟಾಯಿತು. ಆ ಪರಿವಾರದಲ್ಲಿಯ ಎಲ್ಲ ಹಿರಿಯರೂ ಕಿರಿಯರೂ ತೋರಿದ ಮೈತ್ರಿಯಿಂದ ನಜರುಲ್ ಅಲ್ಲಿ ಹೋದಾಗಲೆಲ್ಲ ಸುಸ್ವಾಗತವು ಸಿದ್ಧವಾಗಿರುತ್ತಿತ್ತು. ಕಾಲಕ್ರಮದಲ್ಲಿ ಆ ಮನೆಯಲ್ಲಿ ಬೆಳೆಯುತ್ತಿದ್ದ ಹುಡುಗಿ ಪ್ರಮೀಳೆಯತ್ತ ನಜರುಲ್ ಒಲವು ಹರಿಯಿತು. [ಮುಂದಿನ ದಿನಗಳಲ್ಲಿ ಅವಳು 'ಪ್ರಮೀಳಾ ನಜರುಲ್ ಇಸ್ಲಾಮ' ಎಂದು ತನ್ನ ರುಜು ಹಾಕುತ್ತಿದ್ದಳು] ಅವಳು ಶ್ರೀಯುತ ಸೇನಗುಪ್ತರ ಅತ್ತಿಗೆ ಗಿರಿಬಾಲಾದೇವಿಯ ಏಕಮಾತ್ರ ಪುತ್ರಿಯೆಂದು ಈ ಮೊದಲೇ ಹೇಳಿದ್ದೇವೆ, ಗಿರಿಬಾಲಾದೇವಿ ವಿಧವೆಯಾಗಿದ್ದರಿಂದ ಬಂಗಾಲೀ ಸಮಾಜ ದಲ್ಲಿ ವಾಡಿಕೆಯಾಗಿದ್ದಂತೆ ತಾಯಿಮಗಳಿಬ್ಬರೂ ಶ್ರೀಯುತ ಸೇನಗುಪ್ತರ ಆಶ್ರಯ ದಲ್ಲಿಯೇ ಇದ್ದರು. 'ದೂಲಿ', 'ದೋಲನ', ಎಂಬ ಪ್ರೀತಿಯ ಹೆಸರುಗಳಿಂದ ಕರೆಯಲಾಗುತ್ತಿದ್ದ ಪ್ರಮೀಲಾ ಆಗ 13-14 ವರ್ಷದವಳಿದ್ದಿರಬಹುದು, ಅವಳಿಗೂ ಕವಿಯ ಮುಚ್ಚುಮರೆ ಇಲ್ಲದ ಉತ್ಸಾಹದ ಸ್ವಭಾವವು ಮೋಹಕವಾಗಿ ಕಂಡಿರ ಬಹುದು. ಸನ್ 1922 ರಲ್ಲಿಯೇ ಅವರಿಬ್ಬರಿಗೂ ಪರಸ್ಪರ ಆಕರ್ಷಣೆಯ ಅರಿವು ಆಗಿದ್ದಂತೆ ತೋರುತ್ತದೆ. ಆ ವರ್ಷ ಮೊಸ್ಲೆಮಭಾರತದಲ್ಲಿ ಪ್ರಕಟವಾದ 'ಬಿಜಯಿನೀ' ಎಂಬ ಪ್ರೇಮಗೀತೆಯು, ಆಗಲೇ ನಜರುಲ್ ವಚನ ಬದ್ಧನಾಗಿದ್ದಿರಬಹುದೆಂದು ಸೂಚಿಸುತ್ತದೆ. (ಮುಂದೆ ಈ ಕವಿತೆಯನ್ನು 'ಛಾಯಾನಟ' ಎಂಬ ಸಂಕಲನದಲ್ಲಿ

ಸೇರಿಸಲಾಯಿತು). ಆದರೆ ಅದಿನ್ನೂ ಗುಟ್ಟಿನ ಮಾತಾಗಿಯೇ ಇದ್ದಿತು. ಇಷ್ಟರಲ್ಲಿ ನಜರುಲ್ ಆಸಕ್ತಿಯು ಧೂಮಕೇತುವಿನ ಪ್ರಕಟನೆಯತ್ತ ಹರಿಯಿತು. ಅದರ ತರುವಾಯ ಅವನ ಜೈಲು ವಾಸವಾಯಿತು. ಹೀಗೆ ಅನಿವಾರ್ಯವಾಗಿ ಒದಗಿದ ವಿಳಂಬದಿಂದ ಅವರಿಬ್ಬರಿಗೂ ತಮ್ಮ ಪ್ರೀತಿ ನಿಜವಾದುದೆಂದು ಖಚಿತ ಪಡಿಸಿಕೊಳ್ಳು ವದಕ್ಕೆ ಕಾಲಾವಕಾಶ ದೊರೆಯಿತು. ಸನ್ 1924 ರಲ್ಲಿ ನಜರುಲ್ ಹೂಗಲಿಯಲ್ಲಿ ನೆಲಿಸಿದ ಕೂಡಲೇ ಮದುವೆಯ ನಿಶ್ಚಯವನ್ನು ಪ್ರಕಟಿಸಲಾಯಿತು, ಮದುವೆಯೂ ಆಯಿತು.

ಹಿಂದೂ ಮುಸ್ಲಿಮ ಸಮಾಜಗಳೆರಡರಲ್ಲೂ ಸಾಕಷ್ಟು ಕೂಗಾಟ ಚೀರಾಟ ನಡೆಯಿತು. ನಜರುಲ್ ಪ್ರಮಿಲಾರ ಪ್ರೀತಿ ಧೈರ್ಯಗಳು ಎಂದಿನಂತೆಯೇ ಇದ್ದವು. ಒಂದು ಸುಸಂಸ್ಕೃತ ಹಿಂದೂ ಮನೆತನದ ಹುಡುಗಿ ಮುಸಲ್ಮಾನನೊಬ್ಬನನ್ನು ಮದುವೆಯಾಗುವದು ಬರೀ ಶಾಸ್ತ್ರವಿರೋಧಮಾತ್ರವಾಗಿರದೆ ಅವಳ ಮನೆತನಕ್ಕೂ ಸಮಾಜಕ್ಕೂ ಅವಮಾನವೆಂದು ಎಣಿಸಲಾಗುತ್ತಿತ್ತು. ಗಿರಿಬಾಲಾದೇವಿಯೊಬ್ಬಳ ಹೊರತು ಸೇನಗುಪ್ತರ ಮನೆಯಲ್ಲಿ ಯಾರಿಗೂ ಈ ಮದುವೆ ಒಪ್ಪಿಗೆಯಾಗಲಿಲ್ಲ. ಅವಳೊಬ್ಬಳು ಮಾತ್ರ ಮಗಳು ಅಳಿಯನಿಗೆ ಬೆಂಬಲವಾಗಿ ನಿಂತು ತನ್ನ ಹಳೆಯ ಋಣಾನುಬಂಧಗಳನ್ನು ಕಡಿದುಕೊಂಡಳು. ಹೊಸದಾಗಿ ಹೂಡಿದ ಈ ಸಂಸಾರಕ್ಕೆ ಅವಳೇ ಹಿರಿಯಳಾಗಿ ಮುಂದೆ ಬಂದ ಕಷ್ಟಸುಖಗಳನ್ನೆಲ್ಲ ನಡಸಿಕೊಂಡು ಹೋದ ಳೆಂಬದನ್ನು ಮುಂದೆ ಇನ್ನೂ ಹೇಳುವದಿದೆ. ನಜರುಲ್‌ನನ್ನು ತನ್ನ ಮಗನಂತೆ ಪ್ರೀತಿ ಸಿದ್ದ ವಿರಾಜಸುಂದರೀ ದೇವಿಯು ಈ ಮದುವೆಯನ್ನೊಪ್ಪದೇ ಹೊಗಿದ್ದರೆ, ಆ ಸಮಾರಂಭದಿಂದ ದೂರ ಉಳಿದಿದ್ದರೆ, ಮುಂದೆ ಬಹುಕಾಲದವರೆಗೆ ಇವರಿಂದ ದೂರ ವಾಗಿದ್ದರೆ, ಆಶ್ಚರ್ಯಪಡುವಂತಹದೇನೂ ಇಲ್ಲ. ಅವಳಿಗೆ ಇನ್ನೂ ಮದುವೆಯಾಗ ಬೇಕಾಗಿದ್ದ ಗಂಡು ಹೆಣ್ಣು ಮಕ್ಕಳಿದ್ದರು. ಸಮಾಜದ ದೃಷ್ಟಿಯಲ್ಲಿ ಅವರನ್ನು ಕಲಂಕದಿಂದ ದೂರವಿಡುವದು ಅವಳ ಹೊಣೆಯಾಗಿತ್ತು. ಅವಳ ಮನಸನ್ನು ನಜರುಲ್ ಸರಿಯಾಗಿ ತಿಳಿದಿದ್ದನು. ಮುಂದೆ ಅವನು ತನ್ನ 'ಸರ್ವಹಾರಾ' ಎಂಬ ಕೃತಿಯನ್ನು ಅವಳಿಗೆ ಸಮರ್ಪಣೆ ಮಾಡಿದನು. ಸುದೈವದಿಂದ ಅವರ ನಡುವಿನ ಅಂತರ ಬಹುಕಾಲ ಉಳಿಯಲಿಲ್ಲ. ಸನ್ 1933 ರ ಹೊತ್ತಿಗೆ ಅವರ ಸ್ನೇಹಸಂಬಂಧ ಗಳು ಮೊದಲಿನಂತೆಯೇ ಆಗಿ 1938 ರಲ್ಲಿ ವಿರಾಜಸುಂದರಿಯ ಮರಣಕಾಲದವರೆಗೆ ನಡೆದುಬಂದವು.

ಈ ವಿವಾಹಸಂಬಂಧ ಮುಸಲ್ಮಾನರಿಗೂ ಪ್ರಿಯವಾಗಲಿಲ್ಲ. ಅಂದಿನ ವಾತಾವರಣ ದಲ್ಲಿ ಅದೊಂದು ತಮ್ಮ ಜಾತಿಗೆ ದೊರೆತ ವಿಜಯವೆಂದು ತೋರಿರಬಹುದಿತ್ತು. ಆದರೆ ವರನಾಗಲೀ ವಧುವಾಗಲೀ ಜಾತಿಯ ಆಚರಣೆಗಳಿಗೆ ಕಟ್ಟುಬಿದ್ದವರಾಗಿರ ಲಿಲ್ಲ. ಹಿಂದುಗಳನ್ನಾಗಲಿ ಮುಸ್ಲಿಮರನ್ನಾಗಲಿ ಒಪ್ಪಿಸುವದರಲ್ಲಿ ಅವರ ಆಸ್ಥೆಯಿರ ಲಿಲ್ಲ, ಮುಸಲ್ಮಾನರ ಧರ್ಮ ವಿಧಿಗಳಂತೆ ಮದುವೆಯು ನಡೆಯುವದಕ್ಕೆ ಪರಿಸ್ಥಿತಿ ಅನುಕೂಲವಾಗಿದ್ದರೂ ಅದು ಬೇರೆ ವಿಧವಾಗಿ ನಡೆದದ್ದು ಅನೇಕ ಮುಸಲ್ಮಾನರಲ್ಲಿ ಅಸಮಾಧಾನಕ್ಕೆ ಕಾರಣವಾಯಿತು. ಪ್ರಮೀಳೆಯ ವಯಸ್ಸು ಆಗ ಕೇವಲ ಹದಿ

ನಾರು. ಅವಳಿಗೆ ಹದಿನೆಂಟು ವಯಸ್ಸಾಗುವವರೆಗೆ ಇಂಡಿಯನ್ ಸಿವಿಲ್ ಮೇರೇಜಿಸ್ ಆಕ್ಟಿನಂತೆ ಮದುವೆಯನ್ನು ನೋಂದಾಯಿಸುವಂತೆ ಇರಲಿಲ್ಲ. ಆದ್ದರಿಂದ ಈ ಮದುವೆ ಯಾಗಬೇಕಾಗಿದ್ದರೆ ಅವಳಿಗೆ ಮುಸಲ್ಮಾನ ಧರ್ಮದ ದೀಕ್ಷೆಕೊಟ್ಟು ಆ ಮೇಲೆ ಮುಸಲ್ಮಾನ ಧರ್ಮಾಚಾರದಂತೆ ಮದುವೆ ನಡೆಯಬೇಕಿತ್ತು. ಶ್ರದ್ಧಾಳುಗಳಾದ ಮುಸಲ್ಮಾನರ ಅಭಿಪ್ರಾಯದಂತೆ ಈ ಅಧಿಕಾರವು ಕೇವಲ ಬೈಬಲ್ ಪರಂಪರೆಯ ಗ್ರಂಥಗಳನ್ನೊಪ್ಪಿದ ಮುಸ್ಲಿಮ ಯಹೂದಿ, ಕ್ರಿಶ್ಚಿಯನ್ನರಿಗೆ ಮಾತ್ರ ಲಭ್ಯವಿತ್ತು. ಆದ್ದರಿಂದ ಮತಾಂತರವಿಲ್ಲದೆ ಪ್ರಮಿಲಾ ನಜರುಲ್‌ನನ್ನು ಮದುವೆಯಾಗುವಂತಿರಲಿಲ್ಲ. ಆದರೆ ಭಾರತದಲ್ಲಿ ಅಕಬರನಂತಹ ಮುಗಲ್ ಚಕ್ರವರ್ತಿಗಳು ಹಿಂದೂ ಸ್ತ್ರೀಯರನ್ನು ಮತಾಂತರ ಗೊಳಿಸದೆಯೇ ಮುಸ್ಲಿಮ ವಿಧಾನದಲ್ಲಿ ಮದುವೆಮಾಡಿಕೊಂಡದ್ದು ಮಾತ್ರ ವಲ್ಲದೆ ಮದುವೆಯ ನಂತರ ಆ ಸ್ತ್ರೀಯರು ತಮ್ಮ ಹಿಂದೂ ಶ್ರದ್ಧೆ ಆಚಾರಗಳಂತೆಯೇ ಇರುವುದನ್ನು ಅವರು ಒಪ್ಪಿದ್ದರು. ಇದನ್ನು ಮುಸ್ಲಿಮ ಶ್ರದ್ಧಾವಂತರು ಒಪ್ಪುತ್ತಿರ ಲಿಲ್ಲ. ಆದರೆ ಯಾರಿಗೇ ಆದರೂ ತಮ್ಮ ಮತ-ಶ್ರದ್ಧೆಯನ್ನು ಬಿಟ್ಟುಕೊಡಲಿಕ್ಕೆ ಹೇಳುವದು ತನ್ನ ಪ್ರಾಮಾಣಿಕತೆಗೂ ಸ್ವಾಭಿಮಾನಕ್ಕೂ ಕಡಮೆ ಎಂಬದು ನಜರುಲ್‌ನ ಭಾವನೆಯಾಗಿತ್ತು. ಆದ್ದರಿಂದ ಪ್ರಮಿಳೆಗೆ ಮುಸಲ್ಮಾನ ಧರ್ಮದ ದೀಕ್ಷೆಯನ್ನು ಕೊಡದೆಯೇ ಈ ಮದುವೆಯನ್ನು ಮುಸಲ್ಮಾನ ಪದ್ಧತಿಯಿಂದ ನಡೆಸ ಲಾಯಿತು. ಇದಲ್ಲದೆ, ನಜರುಲ್ ತನ್ನ ಎಳೆಯ ವಯಸಿನ ಹೆಂಡತಿಯನ್ನೂ ತನ್ನ ಮನೆಯ ವ್ಯವಹಾರಗಳನ್ನೂ ನೋಡಿಕೊಳ್ಳುವದನ್ನು ತನ್ನ ಅತ್ತೆಗೆ ವಹಿಸಿಬಿಟ್ಟಿ ದ್ದನು ; ಅವಳು ಹಿಂದೂ ವಿಧವೆಯಂತಲ್ಲದೆ ಇನ್ನಾವ ರೀತಿಯಲ್ಲೂ ಇರುವದು ಅಸಾಧ್ಯವಿತ್ತು. ಹೀಗಾಗಿ ಅವರ ಮನೆಯಲ್ಲಿ ಹಿಂದೂ ಮುಸ್ಲಿಮರ ಮತಾಚಾರ ಗಳಿಗೆ ಕಟ್ಟುಬೀಳದ ಜಾತ್ಯತೀತವಾದ ಒಂದು ಜೀವನಕ್ರಮ ನಡೆಯುತ್ತಿದ್ದಿತು. ಇದು ಅನೇಕಜನ ಮುಸಲ್ಮಾನರಿಗೆ ಒಪ್ಪಿಯಾಗಲಿಲ್ಲವೆಂಬದನ್ನು ಮುಂದೆ ಹೇಳುವೆವು. ನಜರುಲ್ ಕಟ್ಟಾ ಮುಸಲ್ಮಾನನಾಗಿರಬೇಕೆಂಬದು ಅವರ ನಿರೀಕ್ಷೆಯಾಗಿತ್ತು. ಆದರೆ ನಜರುಲ್ ನಜರುಲ್‌ನೇ ! ಅವನೊಬ್ಬ 'ಬಂಡುಗಾರ' ಮತ್ತು 'ಕವಿ. ಅವನ ಮಟ್ಟಿಗೆ ಮದುವೆ ಎಂದರೆ ಮದುವೆ ! ಇದರಿಂದಾಗಿ ಅವನು ಮಿತ್ರರಿಗೂ ಓದುಗರಿಗೂ ಹೆಚ್ಚಾಗಿಯೇ ಪ್ರಿಯನಾದನು. ಕವಿಯ ಮತ್ತು ಕವಿಪತ್ನಿಯ ಪ್ರೇಮ ಧೈರ್ಯಗಳನ್ನು ಅವರು ಮೆಚ್ಚಿದರು. ಅಂತೂ ಅವರ ಜೀವನ ಸುಖಮಯ ವಾಗಿತ್ತು, ಅವರ ಕೈಯಲ್ಲಿಲ್ಲದ ಅದೃಷ್ಟವು ಎರಗಿ ಬಂದು ಅವರನ್ನು ಅನಿರೀಕ್ಷಿತ ವಾದ ಆಪತ್ತಿಗೆ ಈಡುಮಾಡುವವರೆಗೆ. ನಜರುಲ್ ಮಾದರಿಯ ಗೃಹಸ್ಥನೆಂದೇನೂ ಹೇಳುವಂತಿರಲಿಲ್ಲ. ಆದರೆ ಅವನು ತನ್ನ ಹೆಂಡತಿಯನ್ನೂ ಪರಿವಾರವನ್ನೂ ಅತಿಶಯ ವಾಗಿ ಪ್ರೀತಿಸುತ್ತಿದ್ದನೆಂಬುದರಲ್ಲಿ ಸಂಶಯವೇ ಇಲ್ಲ. ಸನ್ 1939 ರಿಂದ 1962 ಜೂನ 30 ನೆಯ ದಿನ ಪ್ರಮಿಲಾ ಮರಣ ಹೊಂದುವ ವರೆಗೆ ಎಂತಹ ದೈಹಿಕ ಮತ್ತು ಪ್ರಾಪಂಚಿಕ ಕಷ್ಟಗಳಲ್ಲಿಯೂ ವಿಚಲಿತವಾಗದ ಅವಳ ಪತಿಭಕ್ತಿಯು ಯಾವ ಪ್ರೇಮ ಧೈರ್ಯಗಳ ಕತೆಗಳಿಗೂ ಕಡಮೆಯಾದುದಲ್ಲ.

ಸದ್ಯ, ಹೂಗಲಿಯಲ್ಲಿ ಇವರು ಹೂಡಿದ ಪುಟ್ಟ ಹೊಸ ಸಂಸಾರ ನಡೆಯುವ

ದಕ್ಕೆ ಹಣವು ಅವಶ್ಯವಾಗಿ ಬೇಕಿದ್ದಿತು. ನಜರುಲ್‌ಗೆ ಶ್ರೀಮಂತಿಕೆಯಂತೂ ಎಂದೂ ಬರಲೇ ಇಲ್ಲ. ಅವನ ಗ್ರಂಥಗಳಿಂದ ಮತ್ತು ಬರಹಗಳಿಂದ ಒಂದು ಮಿತವಾದ ಆದಾಯ ಬರುತ್ತಿದ್ದಿತು. ಆದರೆ ಅವನ ಔದಾರ್ಯ ಒಂದು ದೋಷವೆನಿಸುವಷ್ಟು ದೊಡ್ಡದಾಗಿತ್ತು. ಕಲಕತ್ತೆಯಿಂದ ಬರುತ್ತಿದ್ದ ಅತಿಥಿಗಳ ಸಂಖ್ಯೆ ಸಣ್ಣದಾಗಿರಲಿಲ್ಲ; ಅವರಿಗೆ ಸೊಗಸಾದ ಆತಿಥ್ಯ ದೊರೆಯುತ್ತಿತ್ತು; ಅದರಿಂದ ಹಣದ ಕೊರತೆ ಮಾತ್ರ ಹೆಚ್ಚುತ್ತಿತ್ತು. ಸಂಗೀತ ಕಚೇರಿಗಳೂ, 'ಅಡ್ಡಾ'ಗಳೂ, ಊಟ ಉಪಚಾರಗಳೂ, ನಡೆಯುತ್ತಿದ್ದು ದಿನಗಳು ಸುಖವಾಗಿ ಕಳೆದು ಹೋಗುತ್ತಿದ್ದವು. ಅವುಗಳ ಹಿಂದೆಯೇ ಮನೆಯವರಿಗೆ ಹಣಕ್ಕಾಗಿ ಪರದಾಡುವ ದಿನಗಳೂ ಇರುತ್ತಿದ್ದವು. ಸನ್ 1925 ರ ಕೊನೆಯ ಹೊತ್ತಿಗೆ ಪರಿಸ್ಥಿತಿ ಬಿಗಡಾಯಿಸಿತು. ಹಣದ ಕಷ್ಟವೊಂದೇ ಅಲ್ಲದೆ ನಜರುಲ್‌ನನ್ನು ಆಗಾಗ ಮಲೇರಿಯ ಕಾಡತೊಡಗಿತು. [ನಜರುಲ್‌ನ ಹಳೆಯ ಗೆಳೆಯ ಮುಜಫ್ಫರ ಅಹಮ್ಮದ ಅಲ್ಲಿರಲಿಲ್ಲ; ರೆಗ್ಯುಲೇಶನ್ III ರನ್ವಯ ಜೈಲಿನಲ್ಲಿದ್ದನು] ಆದ್ದರಿಂದ ಕೃಷ್ಣನಗರದಲ್ಲಿಯ ಅವನ ಮಿತ್ರರು—ವಿಶೇಷವಾಗಿ ದಿ. ಹೇಮಂತಕುಮಾರ ಸರಕಾರರು—ಅವನು ಹೂಗಲಿಯನ್ನು ಬಿಟ್ಟು ತನ್ನ ಪರಿವಾರದೊಡನೆ ಕೃಷ್ಣನಗರದಲ್ಲಿ ಬಂದು ಇರಬೇಕೆಂದು ಒತ್ತಾಯಿಸಿದರು. ಇದು ಸುಮಾರು 1926ರ ಜನವರಿ 3.

ಇಷ್ಟೆಲ್ಲ ಕಷ್ಟಗಳಿದ್ದರೂ ಹೂಗಲಿಯಲ್ಲಿ ಕಳೆದ ದಿನಗಳಲ್ಲಿ ಕಾವ್ಯ ರಚನೆಗಾಗಲಿ ರಾಜಕೀಯ ಚಟುವಟಿಕೆಗಳಿಗಾಗಲಿ ಕೊರತೆ ಇರಲಿಲ್ಲ. ಅವನು ಗಾಂಧೀಜಿಯವರನ್ನು ಮೊದಲು ಕಂಡದ್ದು ಇದೇ ಅವಧಿಯಲ್ಲಿ. (ಮತ್ತೆ ಅವರನ್ನು ಕಾಣುವ ಅವಕಾಶ ಒದಗಲೇ ಇಲ್ಲ). ಜೈಲಿನಿಂದ ಗಾಂಧೀಜಿಯವರ ಬಿಡುಗಡೆಯಾದ ತರುವಾಯ ಅವರು ಬಂಗಾಲದಲ್ಲಿ ಸಂಚಾರ ಕೈಕೊಂಡಿದ್ದರು. ಗಾಂಧೀಜಿಯವರ ಮತಗಳೆಲ್ಲವೂ ನಜರುಲ್‌ನಿಗೆ ಒಪ್ಪಿಗೆಯಾಗದಿದ್ದರೂ, ಅವರ ಆಕರ್ಷಣೆಗೆ ಅವನು ಸ್ಪಂದಿಸದಿರಲಿಲ್ಲ. ನಜರುಲ್‌ನ 'ಚರಕದ ಹಾಡು' ಮತ್ತು ಕೆಲವು ಗಾಂಧಿಯವರನ್ನು ಕುರಿತು ರಚಿಸಿದ ಕೃತಿಗಳು ಇದೇ ಸಂದರ್ಭದಲ್ಲಿ ಹುಟ್ಟಿದುವು. ಗಾಂಧೀಜಿಯವರ ಮುಂದೆ ಅವನು ರಚಿಸಿ ಹಾಡಿದ 'ಚರಕದ ಹಾಡ'ನ್ನು ಅವರು ಬಹಳವಾಗಿ ಮೆಚ್ಚಿದರು.

ಇದೇ ಸಮಯದಲ್ಲಿ ದೇಶಬಂಧು ಚಿತ್ತರಂಜನದಾಸರ ಮರಣದಿಂದ ಪ್ರಚೋದಿತವಾದ ಕವಿತೆಗಳಲ್ಲಿ ವ್ಯಕ್ತವಾದ ಭಾವನೆಗಳು ಹೆಚ್ಚು ಆಳವಾಗಿವೆ. ಅವುಗಳ ಕಾವ್ಯ ಗುಣವೂ ನಾದಮಾಧುರ್ಯವೂ ಉನ್ನತಮಟ್ಟದುವಾಗಿವೆ. ದೇಶಬಂಧು ದಾಸರು ದಾರ್ಜೀಲಿಂಗಿನಲ್ಲಿ 1925 ಜೂನ 22ನೆಯ ದಿನ ಅನಿರೀಕ್ಷಿತವಾಗಿ ಮರಣಹೊಂದಿದರು. ಬಂಗಾಲ ಪ್ರಾಂತವೆಲ್ಲ ದುಃಖದಲ್ಲಿ ಮುಳುಗಿ ದಿಗ್ಭ್ರಾಂತವಾಯಿತು. ಅದು ನಜರುಲ್‌ನಿಗೆ ವೈಯಕ್ತಿಕವಾಗಿಯೂ ದೊಡ್ಡ ಪೆಟ್ಟಾಯಿತು. ಏಕೆಂದರೆ ದಾಸ ಪರಿವಾರದವರೆಲ್ಲ ಅವನನ್ನು ಪ್ರೀತಿಯಿಂದಲೂ ಆದರದಿಂದಲೂ ಕಾಣುತ್ತಿದ್ದರು. ನಜರುಲ್ ತನಗಾದ ದುಃಖವನ್ನು ಅನೇಕ ಸ್ಮೃತಿಗೀತಗಳಲ್ಲಿ ತೋಡಿಕೊಂಡನು. ಅವನ್ನೆಲ್ಲ ಕೂಡಿಸಿ 'ಚಿತ್ತನಾಮಾ' ಎಂಬ ಒಂದು ಸಂಕಲನವನ್ನೇ ಪ್ರಕಟಿಸಿದನು. ಇದೇ ಸಮಯಕ್ಕೆ 'ಝುರ' (ಬಿರುಗಾಳಿ) ಎಂಬ ದೀರ್ಘಕವನವೊಂದನ್ನು ಬರೆದನು.

ಮುಂದೆ ಅದು 'ಬಿಷೇರ ಬಂಶೀ' (ವಿಷದ ಕೊಳಲು) ಎಂಬ ಸಂಕಲನದಲ್ಲಿ ಸೇರ್ಪಡೆಯಾಯಿತು. ಸನ್ 1925ನೆಯ ವರುಷದ ಕೊನೆಯಾಗುವದರ ಮೊದಲು ಮೂರನೆಯದೊಂದು ಸಂಕಲನವೂ ಹೊರಬಂದಿತು. ಇದು ನಜರುಲ್‌ನ ರಾಜಕೀಯ ವಿಚಾರಗಳಿಗೂ ಚಟುವಟಿಕೆಗಳಿಗೂ ಹೆಚ್ಚು ಪ್ರಾಮುಖ್ಯವನ್ನಿತ್ತ ಕಾರಣ ವಿಶೇಷವಾಗಿ ಗಮನ ಸೆಳೆಯಿತು.

ನಜರುಲ್ ಸಾಹಿತ್ಯರಚನೆಗೆ ಆರಂಭಿಸಿದ ಮೊದಲ ದಿನಗಳಿಂದಲೂ (1921) ಸೋವಿಯೆತ್ ಸಮಾಜವಾದದ ವಿಚಾರಗಳೂ ಕಾರ್ಯಾಚರಣೆಗಳೂ ಅವನ ಮನ ಸೆಳೆದಿದ್ದವು. ಅದಕ್ಕೆ ಕಾರಣ ಅವನಲ್ಲಿ ಸಹಜವಾಗಿದ್ದ ಧ್ಯೇಯವಾದ, 'ಸ್ವಾತಂತ್ರ್ಯ ಸಮತೆ ಬಂಧುತ್ವ' ಗಳಲ್ಲಿ ಅವನಿಗಿದ್ದ ಆಸಕ್ತಿ. ಸೋವಿಯೆತ್ ಆಡಳಿತದ ವಿಚಾರವಾಗಿಯಾಗಲಿ, ಕಮ್ಯುನಿಜಂ ಸಿದ್ಧಾಂತ ವ್ಯವಹಾರಗಳ ವಿಚಾರವಾಗಿಯಾಗಲಿ ಅಂದಿನ ಕಾಲದಲ್ಲಿ ಪರಿಜ್ಞಾನವನ್ನು ಪಡೆದವರು ಭಾರತದಲ್ಲಿ ಹೆಚ್ಚು ಜನರಿರಲಿಲ್ಲ, ಹಾಗಿದ್ದರೂ ಕಮ್ಯುನಿಜಂನ ಸ್ಥೂಲವಾದ ಕಲ್ಪನೆಯೇ ಆದರ್ಶವಾದಿಗಳಾಗಿದ್ದ ತರುಣ ಭಾರತೀಯರ ಉತ್ಸಾಹವನ್ನು ಕೆಣಕಿತ್ತು. ಈ ಮೊದಲೇ ಹೇಳಿದಂತೆ ಕಾವ್ಯ ಸಾಹಿತ್ಯಾಸಕ್ತಿಗಳಿಂದ ಒಂದೆಡೆಗೆ ಸೇರಿದ ನಜರುಲ್ ಮತ್ತು ಮುಜಪ್ಫರ ಅಹಮ್ಮದರು ತಮ್ಮ ರಾಜಕೀಯ ವಿಚಾರಗಳು ಮತ್ತು ಜನ ಹಿತದಲ್ಲಿಯ ಆಸಕ್ತಿಗಳಿಂದಾಗಿ ಇನ್ನೂ ಹತ್ತಿರವಾದರು. ತಾವಿಬ್ಬರೂ ಭಾರತದಲ್ಲಿ ಕಮ್ಯುನಿಜಂ ಪ್ರಚಾರಕ್ಕೆ ದುಡಿಯಬೇಕೆಂದು ತನ್ನ ಗೆಳೆಯನು ಸೂಚಿಸಿದ್ದು ನಜರುಲ್‌ಗೆ ಒಪ್ಪಿಗೆಯಾಯಿತು. ಅವರಿಬ್ಬರಲ್ಲಿ ಮುಜಪ್ಫರ ಅಹಮ್ಮದ ನಿರ್ವಿಕಾರ ಸ್ವಭಾವದವನು ; ಹೆಚ್ಚಿನ ನಿರ್ಧಾರವುಳ್ಳವನು ; ಸುಮಾರು 1922 ರಿಂದಲೂ ಅವನು ಭಾರತದಲ್ಲಿ ಕಮ್ಯುನಿಸ್ಟ ಪಕ್ಷವನ್ನು ಕಟ್ಟುವದರಲ್ಲಿ ತೊಡಗಿದನು. ಆದರೆ ನಜರುಲ್ ಸ್ವಭಾವ ಬೇರೆ. ಒಂದುವೇಳೆ ಅವನಿಗೆ ಮಾರ್ಕ್ಸವಾದದ ಸಿದ್ಧಾಂತ ಆಚರಣಗಳನ್ನು ತಿಳಿಯುವದಕ್ಕೆ ಅವಶ್ಯವಿದ್ದ ಗ್ರಂಥಸಹಾಯ ದೊರೆತಿದ್ದರೂ ಅದನ್ನು ಪರೀಕ್ಷಿಸಿ ನೋಡುವದಕ್ಕಾಗಲೀ ಒಂದು ಮಾರ್ಕ್ಸವಾದಿ ಸಂಸ್ಥೆಯನ್ನು ಕಟ್ಟುವದಕ್ಕಾಗಲೀ ಅವಶ್ಯವಾದ ತಾಳ್ಮೆ ಯತ್ನಶೀಲತೆಗಳು ಅವನವಾಗಿರಲಿಲ್ಲ. ಅವನಿಗೆ ಕವಿತೆ ಹಾಡುಗಳ ಸೆಳೆತ ಬಲವಾಗಿದ್ದಿತು. ಸದ್ಯದಲ್ಲಿಯೇ ಬಿಡುಗಡೆ ಬೇಕೆನ್ನುತ್ತಿದ್ದ ರಾಷ್ಟ್ರೀಯ ಹೋರಾಟ ಅವನ ಸುತ್ತಲೂ ನಡೆಯುತ್ತಿದ್ದಾಗ ಮಾರ್ಕ್ಸವಾದದ ಅಧ್ಯಯನದತ್ತ ಅವನ ಮನಸು ಒಲಿಯಲಿಲ್ಲ ; ಅವನಿಗೆ ಬಿಡುವೂ ದೊರೆಯುತ್ತಿರಲಿಲ್ಲ. ಅವನ ಸ್ವಂತದ ಭಾವಾವೇಶವೇ ಅವನನ್ನು ತೂರಿಸಿಕೊಂಡು ಹೋಗುವದಕ್ಕೆ ಸಾಕಷ್ಟಿದ್ದಿತೆಂಬದನ್ನು ಧೂಮಕೇತುವಿನಲ್ಲಿಯ ಬರಹಗಳಲ್ಲಿ ಕಾಣಬಹುದು. ಅವನ ಕ್ರಾಂತಿವಾದಕ್ಕೆ ಬಲ ಬರುತ್ತಿದ್ದದ್ದು ರಾಷ್ಟ್ರೀಯತೆ ಮತ್ತು ಪ್ರಜಾಪ್ರಭುತ್ವದ ವಿಚಾರಗಳಿಂದಲ್ಲದೆ ಯಾವದೇ ತರದ ಕಮ್ಯುನಿಜಂ ಅಥವಾ ಕಾರ್ಮಿಕವಾದದಿಂದಲ್ಲ. ಆದರೆ ಅಂದಿನ ಕಾಲವು ಅವನಿಗೂ ಅವನಂತೆ ಇನ್ನೂ ಅನೇಕ ಸ್ವಾತಂತ್ರ್ಯಪ್ರಿಯರಿಗೂ ಪರೀಕ್ಷೆಯ ಕಾಲವಾಗಿತ್ತು. ಬಾರಡೋಲಿ ನಿರ್ಣಯದಿಂದ ರಾಜಕೀಯದಲ್ಲಿ ತಲೆದೋರಿದ ನಿರ್ವಿಣ್ಣತೆಯು ಸ್ವರಾಜಪಾರ್ಟಿಯ ಚಳುವಳಿಯಿಂದಾಗಲಿ ವಿಧಾನ ಸಭೆಗಳಲ್ಲಿ ವಿರೋಧದಿಂದಾಗಲಿ ಕಡಮೆಯಾಗಲಿಲ್ಲ.

ಆದ್ದರಿಂದ ನಜರುಲ್‌ನಂತಹ ತೀವ್ರಗಾಮಿಗಳು ತಮ್ಮ ನೆಲೆಯನ್ನು ಪುನರ್ವಿಮರ್ಶಿಸ ಬೇಕಾಯಿತು. ಕನಿಷ್ಠ ಪಕ್ಷಕ್ಕೆ ಅವರು ಸಮಾಜವಾದದತ್ತ ಒಲವುಳ್ಳವರಾಗಿದ್ದರು. ನಜರುಲ್ ತನ್ನ 'ಚರಕದ ಹಾಡಿ'ನಲ್ಲೂ ದೇಶಬಂಧುವಿನ ಸ್ಮರಣೆಗಾಗಿ ಬರೆದ ಹಾಡು ಗಳಲ್ಲಿಯೂ ವ್ಯಕ್ತಪಡಿಸಿದ ಭಾವನೆಗಳು ಪ್ರಾಮಾಣಿಕವಾದುವೇ ಆಗಿದ್ದರೂ ಮುಂದೆ ಕೆಲವೇ ದಿನಗಳಲ್ಲಿ ಅವನು ಹೇಮಂತಕುಮಾರ ಸರಕಾರನೊಡನೆ ಕಾಂಗ್ರೆಸ್ಸಿನ ಒಳಗಡೆಯಲ್ಲಿಯೇ "ಲೇಬರ ಸ್ವರಾಜ ಪಾರ್ಟಿ" ಎಂಬ ತೀವ್ರಗಾಮಿ ಸಮಾಜ ವಾದಿಗಳ ಗುಂಪೊಂದನ್ನು ಸೇರಿದನು (ನವಂಬರ 1925). ಬಂಗಾಲದಲ್ಲಿ ಉದಿಸಿದ ಕಮ್ಯುನಿಜಂ ಪರವಾದ ಪಕ್ಷಗಳಲ್ಲಿ ಲೇಬರ ಸ್ವರಾಜ ಪಾರ್ಟಿಯು ಮೊದಲನೆಯ ದಾಗಿತ್ತು. ಈ ಪಕ್ಷವು ಸ್ಥಾಪನೆಯಾದ ಒಂದು ತಿಂಗಳಲ್ಲಿಯೇ (ಡಿಸೆಂಬರ 1925) ಅದರ ಮುಖಪತ್ರವಾದ 'ಲಾಂಗಲ' (ನೇಗಿಲು) ಪ್ರಕಟವಾಯಿತು. ಅದರ ಬರಹ ಗಾರರಲ್ಲಿ ನಜರುಲ್‌ನೇ ಮುಖ್ಯನಾಗಿದ್ದು ವಸ್ತುತಃ ಅದರ ಸಂಪಾದಕನೆಂಬಂತೇ ಇದ್ದನು. ಲಾಂಗಲವೊಂದು ಪ್ರಭಾವಿಯಾದ ಶಕ್ತಿಯಾಗಲೆಂದು ಬಯಸುವ ಟಾಗೋರರ ಪದ್ಯವೊಂದು ಅದರ ಮೊದಲ ಸಂಚಿಕೆಯನ್ನು ಅಲಂಕರಿಸಿತ್ತು. 25 ಡಿಸೆಂಬರ 1925ರ ಅದರ ಮೊದಲನೆಯ ಸಂಚಿಕೆಯು ಚಿರಸ್ಮರಣೀಯವಾಗುವದಕ್ಕೆ ಇನ್ನೂ ಒಂದು ಕಾರಣವಿದ್ದಿತು; ನಜರುಲ್‌ನ 'ಸರ್ವಹಾರಾ' (ಎಲ್ಲಾ ಕಳೆದು ಕೊಂಡವರು) ಕವಿತೆಗಳ ಮಾಲಿಕೆಯ ಪ್ರಕಟನೆಯು ಈ ಸಂಚಿಕೆಯಿಂದ ಮೊದ ಲಾಯಿತು. ಇವುಗಳಲ್ಲಿ ಪ್ರತಿಯೊಂದು ಕವಿತೆಗೂ ಒಂದೊಂದು ಅದರದೇ ಶೀರ್ಷಿಕೆ ಯಿರುತ್ತಿತ್ತು—'ದೇವರು', 'ಮಾನವ', 'ಪಾಪ', 'ಸೂಳೆ', 'ಹೆಂಗುಸು', 'ಕಾರ್ಮಿಕರು'. ಇದೊಂದು ಅಪೂರ್ವವಾದ ಕೃತಿಯೆನಿಸಿತು ಏಕೆಂದರೆ ದುಡಿಮೆ ಯಿಂದ ಬದುಕುವವರ ಪ್ರಶಸ್ತಿಯೇ ವಿಷಯವಾಗಿದ್ದ ಕವಿತೆಗಳು ಅಂದಿನವರೆಗೆ ಬಂದಿರಲಿಲ್ಲ. ಈ ವರ್ಗಕ್ಕೆ ಜನಪ್ರಿಯವಾದ ಕಾವ್ಯಮಯವಾದ 'ಸರ್ವಹಾರಾ' ಎಂಬ ಹೆಸರನ್ನು ಬಳಸಿದ್ದೂ ಇದರಲ್ಲಿಯೇ ಮೊದಲು. ಇದರಲ್ಲಿಯ ಉಗ್ರವಾದ ದೂಷಣೆಗೆ ಅನ್ಯಾಯವು ಕಮರಿ ಹೋಗುವಂತಿತ್ತು. ಇದರ ವಾದವು ವಾಸ್ತವವಾದ ಧ್ಯೇಯವಾದವಾಗಿತ್ತೇ ಹೊರತು 'ದ್ವಂದ್ವಾತ್ಮಕ ಭೌತವಾದ'ವೆನ್ನುವಂತಿರಲಿಲ್ಲ. ಇದರ ಕಾವ್ಯಗುಣ ಚಿರಸ್ಥಾಯಿಯಾಗಿದೆ. 'ಮಾನವನು ಮಾನವನಾಗಿರುವದೇ ದೊಡ್ಡದು' ಎನ್ನುವದೇ ಅದರ ಸಂದೇಶ.

ಇದರ ಎರಡನೆಯ ಸಂಚಿಕೆಯಲ್ಲಿ, ನಜರುಲ್ ತನ್ನ ಪರಿವಾರದೊಡನೆ ಕೃಷ್ಣ ಗರಕ್ಕೆ ಹೊರಡುವ ಸುಮಾರಿಗೆ (ಜನವರಿ 1925) 'ಕೃಷಿಕೇರ ಗಾನ' ಪ್ರಕಟ ವಾಯಿತು. ಮೂರನೆಯ ಸಂಚಿಕೆಯಲ್ಲಿ ಅಷ್ಟೇ ಪ್ರಸಿದ್ಧವಾದ 'ಸವ್ಯಸಾಚಿ' ಹೊರ ಬಂದಿತು. ಈ ಕೃತಿಗಳಲ್ಲಿ ಎದ್ದು ಕಾಣುತ್ತಿದ್ದ ಘನವಾದ ಕಾವ್ಯಗುಣದಿಂದಾಗಿಯೇ ಲಾಂಗಲ ಪತ್ರಿಕೆಯು ಅದ್ಭುತವಾದ ಯಶ ಗಳಿಸಿತು. ಒಟ್ಟಿನಲ್ಲಿ 'ಲಾಂಗಲ'ದ ಬರವಣಿಗೆ 'ಧೂಮಕೇತು' ವಿನಷ್ಟು ಪ್ರಖರವಾಗಿರಲಿಲ್ಲ. ಆದರೆ ಇದರ ಉದ್ದೇಶ ಹೆಚ್ಚು ಸ್ಪಷ್ಟವಾಗಿ ಅಧಿಕಾರಹೀನರು, ಕೃಷಿಕರು, ಕಾರ್ಮಿಕರು, ಮತ್ತು ಎಲ್ಲ ವಿಧಗಳಲ್ಲಿ ದಬ್ಬಾಳಿಕೆಗೆ ಒಳಗಾದವರ ಪರವಾಗಿತ್ತು. ಈ ಪತ್ರಿಕೆಯು ನಜರುಲ್‌ನ

ವೈಯಕ್ತಿಕ ಹೊಣೆಯಾಗಿರಲಿಲ್ಲವೆಂಬದನ್ನೂ ಗಮನಿಸಬೇಕು. ಇದೊಂದು ರಾಜಕೀಯ ಗುಂಪಿನ, ಲೇಬರ ಸ್ವರಾಜ ಪಾರ್ಟಿಯ, ಮುಖ ಪತ್ರವಾಗಿತ್ತು. ಈ ಪಾರ್ಟಿಯ ಆಫೀಸು ಆ ಕಾಲದಲ್ಲಿ 37 ಹ್ಯಾರಿಸನ್ ರೋಡ ಎಂಬಲ್ಲಿತ್ತು (ಈಗ ಈ ರಸ್ತೆಗೆ ಮಹಾತ್ಮಾ ಗಾಂಧೀ ರೋಡ ಎಂಬ ಹೆಸರಾಗಿದೆ). ನಜರುಲ್ ವಾಸ ಕೃಷ್ಣಗರ ದಲ್ಲಿದ್ದರೂ ಅವನ ವಿಳಾಸ ಈ ಕಾರ್ಯಾಲಯದ್ದೇ ಆಗಿತ್ತು. ಅವನ ಮಿತ್ರರೂ ಸಹಚಿಂತಕರೂ ಅಲ್ಲಿ ಯಾವಾಗಲೂ ಸೇರುತ್ತಿದ್ದರು. ಈ ಲೇಬರ ಸ್ವರಾಜ ಪಾರ್ಟಿ ಯಲ್ಲಿಯೇ ಕೆಲವು ಬದಲಾವಣೆಗಳಾಗಿ ಮುಂದೆ ಅದೊಂದು ಕಮ್ಯುನಿಸ್ಟ ಸಂಗಡ ವಾಯಿತು.

ಜನವರಿ 1926 ರಲ್ಲಿ ನಜರುಲ್ ಕೃಷ್ಣಗರದಲ್ಲಿ ವಾಸಮಾಡಲು ಹೋದನು. ಆ ನಗರದ ತರುಣರಿಂದಲೂ ರಾಜಕೀಯ ಕಾರ್ಯಕರ್ತರಿಂದಲೂ, ಹೇಮಂತ ಕುಮಾರ ಸರಕಾರರಂತಹ ಪ್ರಗತಿಶೀಲರಿಂದಲೂ ಅವನಿಗೆ ಹಾರ್ದಿಕವಾದ ಸ್ವಾಗತ ದೊರೆ ಯಿತು. ಶ್ರೀ ಸರಕಾರ ಆಗ ಬಂಗಾಲ ವಿಧಾನಸಭೆಯಲ್ಲಿ ಸ್ವರಾಜಪಾರ್ಟಿಯ ಪ್ರತಿನಿಧಿ ಯಾಗಿದ್ದನು. ಅವನು ಕಾಲೇಜ ದಿನಗಳಿಂದಲೂ ಸುಭಾಸಚಂದ್ರ ಬೋಸನ ಮಿತ್ರ ನಾಗಿದ್ದನು. (ಈ ಕಾಲದಲ್ಲಿ ಸುಭಾಸನು 1818 ಇಸವಿಯ ರೆಗ್ಯುಲೇಶನ್ III ರನ್ವಯ ಬಂದಿಯಾಗಿ ವಿಚಾರಣೆ ಇಲ್ಲದೆಯೇ ಮಂಡಾಲೆಯ ಜೈಲಿನಲ್ಲಿದ್ದನು). ಶ್ರೀ ಸರಕಾರ ಮೊದಲು ಕಾಲೇಜ ಅಧ್ಯಾಪಕನೂ ತರುಣ ವರ್ಗದ ಮುಖಂಡನೂ ಆಗಿದ್ದು, ಬೌದ್ಧಿಕ, ಸಾಹಿತ್ಯಿಕ ಚಟುವಟಿಕೆಗಳಲ್ಲಿ ಆಸಕ್ತನಾಗಿ ಇತ್ತೀಚೆಗೆ ಕೆಲ ಮಟ್ಟಿಗೆ ಸಮಾಜವಾದದತ್ತ ಒಲಿದವನಾಗಿದ್ದನು. ಸ್ವರಾಜ್ಯದ ಹೋರಾಟವು ಜನ ಸಾಮಾನ್ಯರ ಹೋರಾಟವಾಗಬೇಕೆಂದು ಅವನು ಪ್ರತಿಪಾದಿಸುತ್ತಿದ್ದನು. ಆದ್ದರಿಂದ ಸಹಜವಾಗಿಯೇ ಆವನು ನಜರುಲ್‌ಗೆ ಕಷ್ಟಕಾಲದಲ್ಲಿ ಸಹಾಯ ಮಾಡುತ್ತಿದ್ದನು. ವಿಶೇಷವಾಗಿ ಮುಜಪ್ಫರ ಅಹಮ್ಮದನಿಂದ ಸಹಾಯ ದೊರೆಯುವಂತಿಲ್ಲದಾಗ ಶ್ರೀ ಸರಕಾರ ನಜರುಲ್‌ಗೆ ಇನ್ನೂ ಹತ್ತಿರವಾಗುತ್ತಿದ್ದನು. ಹೀಗಾಗಿ ತಮ್ಮ ಉದ್ದೇಶವನ್ನು ಸಾಧಿಸುವದಕ್ಕೆ ತಾವಿಬ್ಬರೂ ಜತೆಯಾಗಿ ಮುಂದುವರಿಯಬೇಕೆಂದು ಅವರು ನಿರ್ಧರಿಸಿದರು.

ಶ್ರೀ ಸರಕಾರನೂ ಅವನ ಮಿತ್ರರೂ ಈಗಾಗಲೇ ಕೃಷ್ಣಗರದಲ್ಲಿ ಅನೇಕ ಸಭೆ ಸಮ್ಮೇಳನಗಳನ್ನು ನಡೆಸುವ ಯೋಜನೆಗಳನ್ನು ಹಾಕಿಕೊಂಡಿದ್ದರು. ಇವುಗಳಲ್ಲಿ ನಜರುಲ್ ಗಣ್ಯವಾದ ಪಾತ್ರವಹಿಸುವದು ಕ್ರಮಪ್ರಾಪ್ತವಾಗಿತ್ತು. ಸನ್ 1926 ರ ಫೆಬ್ರುವರಿ 6-7 ನೆಯ ದಿನ ಸೇರಬೇಕಾಗಿದ್ದ ಅಖಿಲ ಬಂಗಾಲ ಕೃಷಕ ಪರಿಷತ್ತು ಬಹುಶಃ ಅಂತಹ ಮೊದಲನೆಯದೇ ಸಭೆಯಾಗಿತ್ತು. ಅದಕ್ಕೆ ನಜರುಲ್ ಮಾಡ ಬೇಕಾದ ಕೆಲಸ ಬೇಕಾದಷ್ಟಿತ್ತು. ಕೃಷ್ಣಗರದಲ್ಲಿ ನಜರುಲ್‌ಗೆ ಲಭ್ಯವಾದ ಔಷಧೋಪ ಚಾರಗಳಿಂದಾಗಿ ಅವನು ಕೂಡಲೇ ಈ ಕೆಲಸದಲ್ಲಿ ತೊಡಗುವದು ಸಾಧ್ಯವಾಯಿತು. ಆ ಸಮ್ಮೇಳನದ ಉದ್ಘಾಟನೆಗಾಗಿ ಬರೆದ ಹಾಡು "ಶ್ರಮಿಕೇರಗಾನ" ನಜರುಲ್ಲನದೇ ಆಗಿತ್ತು. ಇದೇ ಸಮ್ಮೇಳನದಲ್ಲಿಯೇ 'ಬಂಗಾಲ ಕೃಷಕ ಕಾರ್ಮಿಕ ಪಕ್ಷ'ದ ಸಂಘಟನೆಯಾಯಿತು. ಬಂಗಾಲದಲ್ಲಿಯ ಕಮ್ಯುನಿಸ್ಟ ಚಳುವಳಿಯ ಉಗಮಸ್ಥಾನ

ವೆಂದು ಮುಂದೆ ಇದಕ್ಕೆ 'ಮೀರತ ಕಮ್ಯುನಿಸ್ಟ ಮುಕದ್ದಮೆ'ಯಲ್ಲಿ ಹೆಚ್ಚಿನ ಪ್ರಾಮುಖ್ಯ ದೊರೆಯಿತು (1929-33). ಸನ್ 1926 ಸಪ್ಟಂಬರ್ 25 ರಿಂದ 'ಲಾಂಗಲ' ಪತ್ರಿಕೆಯು ತನ್ನ ಹೆಸರು ಬದಲಿಸಿ 'ಗಣವಾಣಿ' ಎಂದು ಅಧಿಕೃತವಾಗಿ ಮಾರ್ಕ್ಸ ವಾದವನ್ನೇ ಪ್ರತಿಪಾದಿಸುವ ಪತ್ರಿಕೆಯಾಯಿತು. ಇದರಲ್ಲಿ ನಜರುಲ್ ವಹಿಸಿದ ಪಾತ್ರ ದೊಡ್ಡದಿರಲಿಲ್ಲ. ಇಷ್ಟರಲ್ಲಿ ಜೈಲಿನಿಂದ ಬಿಡುಗಡೆಯಾಗಿ ಬಂದ ಮುಜಪ್ಫರ ಅಹಮ್ಮದನೇ ಇದರ ಸಂಪಾದಕನಾಗಿದ್ದನು. ಮುಂದೆ ಅದು ಮಾರ್ಕ್ಸವಾದದ ಸಿದ್ಧಾಂತಗಳನ್ನೂ ನೀತಿಗಳನ್ನೂ ನಿರ್ವಿಕಾರವಾದ ರೀತಿಯಲ್ಲಿ ವಿವರಿಸುವ ಪತ್ರಿಕೆ ಯಾಯಿತೇ ಹೊರತು ನಜರುಲ್‌ಗೆ ಪ್ರಿಯವಾದ ಉತ್ಸಾಹಭರಿತವಾದ ಸಾಹಿತ್ಯ ಗುಣದ ಪತ್ರಿಕೆಯಾಗಿ ಉಳಿಯಲಿಲ್ಲ.

ಇದರ ತರುವಾಯ ಕೃಷ್ಣನಗರದಲ್ಲಿ ನಡೆಯಲಿದ್ದ ಸಮ್ಮೇಳನಗಳು 1926 ಮೇ ತಿಂಗಳಲ್ಲಿ ನಡೆಯಬೇಕಾಗಿತ್ತು. ಆದರೆ ಏಪ್ರಿಲ್ ತಿಂಗಳಲ್ಲಿಯೇ ಕಲಕತ್ತೆಯಲ್ಲಿ ಹಿಂದೂ ಮುಸ್ಲಿಮ ಕೋಮುವಾದಿಗಳಲ್ಲಿ ಹೊಡೆದಾಟಗಳು ಆರಂಭವಾದವು. ಇಂತಹ ಭಯಂಕರವಾದ ಅಮಾನುಷವಾದ ಗಲಭೆಯನ್ನು ಈ ಮೊದಲು ಯಾರೂ ಕಂಡಿದ್ದಿರ ಲಿಲ್ಲ. ಕೆಲವೇ ದಿನ ಶಾಂತವಾದಂತೆ ತೋರಿ ಮತ್ತೆ ಮೊದಲಿಗಿಂತ ಭೀಕರವಾಗಿ ಮರುಕಳಿಸಿದವು. ಆಸ್ತಿಹಾನಿ, ಪ್ರಾಣಹಾನಿಗಳಾದದ್ದಂತೂ ಸರಿಯೇ, ಅವುಗಳಿಗಿಂತ ಹೆಚ್ಚಿನ ಅನಿಷ್ಟವೆಂದರೆ ಎರಡೂ ಕೋಮಿನವರ ಪತ್ರಿಕೆಗಳು ಹಟದಿಂದಲೂ ಸ್ಪರ್ಧೆ ಯಿಂದಲೂ ಬೆಳಸಿದ ವಿಷಮಯವಾದ ದ್ವೇಷದ ವಾತಾವರಣವಾಗಿತ್ತು. ಇನ್ನೂ ಹೇಯವಾದದ್ದೆಂದರೆ ಅವು ಕೋಮುವಾರು ದ್ವೇಷವನ್ನು ಬೆಳೆಸುವದಕ್ಕೆ ತಮ್ಮ ಮಾರಾಟವನ್ನು ಹೆಚ್ಚಿಸಿ ಲಾಭವನ್ನು ಹೆಚ್ಚಿಸುವದೇ ಉದ್ದೇಶವಾಗಿತ್ತು. ಈ ಕೋಮುಗಳಲ್ಲಿ ಅಂದು ಬೆಳೆದ ಅಪನಂಬಿಕೆ ಬೇಗನೆ ಅಳಿಯುವಂತಹದಾಗಿರಲಿಲ್ಲ. ಅದು ಉಳಿದೇ ಹೋಯಿತು ಎನ್ನುವದು ಮುಂದಿನ ಘಟನೆಗಳಿಂದ ಕಾಣು ವಂತಾಯಿತು.

ನಜರುಲ್ ಲೇಖನಿಯು ಈ ದ್ವೇಷವನ್ನು ಶಮನಮಾಡುವ ಯತ್ನದಲ್ಲಿ ದಣಿವಿಲ್ಲದೆ ಕೆಲಸಮಾಡಿತು. ಮತ್ತು ಇದೇ ಕೊನೆಯವರೆಗೂ ಅವನ ಬಾಳಿನ ಮತ್ತು ಬದುಕಿನ ಗುರಿಯಾಗಿದ್ದಿತು. ಅವನ ಸಿಟ್ಟು, ಖಾರವಾದ ಅಣಕ, ದೇಶಪ್ರೀತಿಗಾಗಿ ಮತ್ತು ಮೈತ್ರಿಗಾಗಿ ಎದೆಕರಗಿಸುವಂತಿದ್ದ ಅವನ ಕರೆಗಳು, ಕೊನೆಗೊಳ್ಳಲಿಲ್ಲ.

ಈ ದ್ವೇಷದ ಛಾಯೆ ಕೃಷ್ಣನಗರದಲ್ಲಿ ಸೇರಿದ ಸಮ್ಮೇಳನಗಳಲ್ಲಿಯೂ ಕವಿದಿತ್ತು. ಅಲ್ಲಿ ಸೇರಿದ ಬಹುಜನರು ಹಿಂದುಗಳಾಗಿದ್ದುದೇ ಅಲ್ಲದೆ ಅವರು ಪ್ರತಿಪಾದಿಸುತ್ತಿದ್ದ ರಾಷ್ಟ್ರವಾದದಲ್ಲಿ 'ಮುಸ್ಲಿಂ ಕೋಮುಭಾವನೆ,' 'ಮುಸ್ಲಿಂ ಪ್ರತ್ಯೇಕತಾವಾದ' ಗಳನ್ನು ಎದುರಿಸಬೇಕೆನ್ನುವ ಭಾವನೆಯೇ ಬಲವಾಗಿತ್ತು, ಆದರೆ ಈ ಸಮ್ಮೇಳನಗಳ ಉದ್ಘಾಟನೆಗಳಿಗಾಗಿ ನಜರುಲ್ ಬರೆದ ಹಾಡುಗಳು ಈ ಕೋಮು ರಾಜಕೀಯದ ಗೊಂದಲದಿಂದ ದೂರವಾದ ದೇಶಪ್ರೇಮವನ್ನೂ ಜನತೆಯ ಸ್ವಾತಂತ್ರ್ಯವನ್ನೂ ಬೇಡಿ ಹಾಡಿದವು. ಇವು ಅವನ ಕೃತಿಗಳಲ್ಲಿ ಅತ್ಯುತ್ತಮವೆಂದು ಎಣಿಸಲಾದ ಕೃತಿ ಗಳಲ್ಲಿ ಸ್ಥಾನಪಡೆದವು.

ಬಂಗಭಾಷೆಯ ರಾಜಕೀಯ ಹಾಡುಗಳ ಸುಗ್ಗಿ ವಿಪುಲವಾಗಿದೆ, ವೈವಿಧ್ಯಮಯ ವಾಗಿದೆ. ಆದರೆ ಎದೆಕಲಕುವಂತಹ ಮೊರೆಯಲ್ಲಾಗಲಿ ಬಡಿದೆಬ್ಬಿಸುವಂತಹ ಧಾಟಿಯಲ್ಲಾಗಲಿ ನಜರುಲ್ ಇಂತಹದೊಂದು ರಾಜಕೀಯ ಸಮ್ಮೇಳನಕ್ಕಾಗಿ ಬರೆದ 'ಕಂದರೀ ಹುಂಶಿಯಾರ' ಎಂಬ ಗೀತವನ್ನು ಸರಿಗಟ್ಟುವಂತಹ ಕೃತಿ ಬಂಗಭಾಷೆ ಯಲ್ಲಿಯೇ ಇಲ್ಲವೆಂದರೂ ಸಲ್ಲುವದು :

ದುರ್ಗಮ ಗಿರಿ ಕಾಂತಾರ ಮರು ದುಸ್ತರ ಪಾರಾವಾರ
ಲಂಘಿತೇ ಹಬೇ ರಾತ್ರಿ ನಿಶೀಥೇ, ಯಾತ್ರಿರಾ, ಹುಂಶಿಯಾರ !

(ಲಂಘಿತೇ ಹಬೇ ಅಂದರೆ ದಾಟಲೇಬೇಕು. ಉಳಿದ ಶಬ್ದಗಳ ಭಾಷಾಂತರ ಅವಶ್ಯವಿಲ್ಲವೆಂದು ತೋರುತ್ತದೆ).

ಇನ್ನೆರಡು ವೃಂದಗೀತಗಳು ಇನ್ನೂ ಉದ್ದಾಮವಾಗಿ ಇದರಂತೆಯೇ ಘನವಾದ ಪ್ರೇರಕಶಕ್ತಿಯುಳ್ಳವಾಗಿದ್ದವು. ಅವುಗಳಲ್ಲೊಂದು ವಿದ್ಯಾರ್ಥಿಗಳ ಸಮ್ಮೇಳನಕ್ಕಾಗಿ ಬರೆದುದಾಗಿದ್ದು ನಜರುಲ್ ಸ್ವತಃ ವೃಂದದ ಮುಖ್ಯ ಗಾಯಕನಾಗಿದ್ದನು. ಅದು ಸೈನ್ಯದಂತೆ ನಡೆಯುವ ಹೆಜ್ಜೆಯ ತಾಳಕ್ಕೆ ಬರೆದದ್ದು :

ಆಮರಾ ಶಕ್ತಿ ಆಮರಾ ಬಲ
ಆಮರಾ ಛಾತ್ರ ದಲ

(ಆಮರಾ ಎಂದರೆ ನಮ್ಮ. ಉಳಿದದ್ದು ಸ್ಪಷ್ಟವಿದೆ).

ಮುಂದಿನ ಪಂಕ್ತಿಗಳ ಬಲ ಮತ್ತು ಉತ್ಸಾಹದ ಉದ್ರೇಕವನ್ನು ಯಾವ ಭಾಷಾಂತರ ದಲ್ಲಿಯೂ ಇಳಿಸುವದು ಸಾಧ್ಯವಿಲ್ಲ.

ಯುವಜನರ ವೃಂದಗೀತ ಅನೇಕ ವಿಧದಲ್ಲಿ ಇದಕ್ಕಿಂತಲೂ ಉದ್ಬೋಧಕ ವಾಗಿತ್ತು :

ಛಲ, ಛಲ, ಛಲ,
ಊರ್ಧ್ವಗಗನೇ ಬಾಜೇ ಮಾದಲ
ನಿಮ್ನೇ ಉತಲಾ ಧರಣೀತಲ
ಅರುಣ ಪ್ರಾತೇರ ತರುಣ ದಲ
ಛಲರೇ ಛಲರೇ ಛಲ್

(ನಡೆಯಿರಿ ನಡೆಯಿರಿ ನಡೆಯಿರಿ ಮುಂದೆ
ನುಡಿಯಿತು ಮುಗಿಲಿನ ಮದ್ದಳೆ ಮೇಲೆ
ನಡುಗಿತು ಭೂತಳ ಕಾಲಡಿಗೆ
ಕಡುಗೆಂಪಿನ ಬೆಳಗಿನ ತರುಣರೆ ಏಳಿ
ನಡೆಯಿರಿ ನಡೆಯಿರಿ ನಡೆಯಿರಿ ಮುಂದೆ)

ನಜರುಲ್ ಇನ್ನೇನನ್ನೂ ಬರೆಯದೆ ಹೋಗಿದ್ದರೂ ಈ ಮೂರೇ ಗೀತಗಳು ಅವನನ್ನು ರಾಷ್ಟ್ರಕವಿಯೆನ್ನಿಸುವದಕ್ಕೆ ಸಾಕಿತ್ತು. ಕೃಷ್ಣಗರದಲ್ಲಿ ಅವನು ಕಳೆದ ದಿನಗಳನ್ನು ಚಿರಸ್ಮರಣೀಯವಾಗಿಸುವದಕ್ಕೆ ಸಾಕಿತ್ತು. ಆದರೆ ಇವುಗಳನ್ನು ಬರೆದ ಕಾಲವು ಎಂತಹ ನಿರಾಶೆಯಿಂದ ತುಂಬಿತ್ತೆಂದರೆ ಇಂತಹ ಶಕ್ತಿಯುತವಾದ ಕರೆಗಳು ಕೂಡ ಯಾವ ಚಟುವಟಿಕೆಯನ್ನಾಗಲಿ ಹೋರಾಟವನ್ನಾಗಲಿ ಪ್ರಚೋದಿಸುವದಕ್ಕೆ ಸಮರ್ಥವಾಗಲಿಲ್ಲ. ಅಂದು ಕೋಮುವಾರುಭಾವನೆ ತುಳಿದ ದಾರಿ ಅತಿ ದುರ್ಗಮವಾಗಿತ್ತು. ಇದನ್ನು ತಿಳಿದೇ ನಜರುಲ್‌ನು ಎರಡೂ ಕೋಮುಗಳಲ್ಲಿ ಮೈತ್ರಿಯನ್ನು ಬೆಳಸುವ ಯತ್ನಗಳಲ್ಲಿ ಅವಿರತವಾಗಿ ತೊಡಗಿದನು. ಅವನು ಬರೆಯುತ್ತಿದ್ದ ಗದ್ಯ ಪದ್ಯಗಳೆರಡರಲ್ಲೂ ಎದೆಕರಗಿಸುವಂತಹ ಕರುಣೆ ತುಂಬಿರುತ್ತಿತ್ತು. ಇನ್ನೊಂದು ಹೇಳಿಕೊಳ್ಳುವಂತಹ ಬಳುವಳಿ ತಮ್ಮದಾಗಿದ್ದರೂ ಮುಂದೆ ಇಪ್ಪತ್ತೇ ವರುಷಗಳಲ್ಲಿ ಬಂಗಾಲೀ ಜನತೆ ಒಡೆದು ಎರಡು ಹೋಳಾಗುವ ದುರಂತ ಅವರದಾಯಿತು. ಅಂದು ನಜರುಲ್ ಬರೆದ ಕೃತಿಗಳಲ್ಲಿ ಇಂದಿಗೂ ನೆನೆಯುವಂತಹವು—'ಹಿಂದೂ ಮುಸ್ಲಿಮ ಯುದ್ಧ' ಎಂಬ ಖಾರವಾದ ಅಣಕ ಪದ್ಯಗಳು ; 'ಪಥೇರ ದಿಶಾ' (ದಾರಿಯ ದಿಕ್ಕು) ಮತ್ತು 'ಮಂದಿರ ಓ ಮಸ್ಜಿದ' ಎಂಬ ಎರಡು ಗದ್ಯಪ್ರಬಂಧಗಳು.

ಇಲ್ಲಿ ಮೋಹಿತಲಾಲ ಮುಜುದಾರ ಮತ್ತು ನಜರುಲ್‌ರ ನಡುವೆ ಆಗ ನಡೆದ ವಿವಾದವನ್ನೂ ಸಂಕ್ಷೇಪವಾಗಿ ಉಲ್ಲೇಖಿಸಬೇಕು. ಶನಿಬರೇರ ಚಿಠೀ ಮತ್ತು ಕಲ್ಲೋಲ ಎಂಬ ಎರಡು ಸಾಹಿತ್ಯ ಮಾಸ ಪತ್ರಿಕೆಗಳ ಹಳೆಯ ಸಂಚಿಕೆಗಳಲ್ಲಿ ಅದು ಹೂತು ಹೋಗಿದೆ. ಆ ಕಾಲದಲ್ಲಿ ಎರಡೂ ಕೋಮುಗಳಲ್ಲಿದ್ದ ಕಹಿಯಾದ ವಾತಾವರಣವೂ ಇದಕ್ಕೆ ಕೆಲಮಟ್ಟಿಗೆ ಕಾರಣವಾಗಿದ್ದಿರಬಹುದು.

ಒಟ್ಟಿನಲ್ಲಿ ಆ ದಿನಗಳು ಕಷ್ಟದ ದಿನಗಳಾಗಿದ್ದವು. ಆದರೂ ನಜರುಲ್ ತನ್ನ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಪಡೆದ ಯಶಸ್ಸಲ್ಲದೆ ಬೇರೆ ಸುಖದ ಘಟನೆಗಳೂ ಕೆಲವು ನಡೆದವು. ಅವನ ಹಿರಿಯ ಮಗ ಬುಲ್‌ಬುಲ ಹುಟ್ಟಿದ್ದು ಕೃಷ್ಣಗರದಲ್ಲಿಯೇ. ಮುಂದೆ ಈ ಹುಡುಗನ ಅಕಾಲ ಮರಣವು ನಜರುಲನಿಗೆ ದುಃಖವನ್ನೇ ತಂದಿತಾದರೂ, ಅವನ ಜನನವು ನಜರುಲ್‌ನನ್ನು ಕವಿದ ದುರ್ದಿನಗಳಲ್ಲಿ ಬೆಳಕಿನ ಸೆಳಕಾಗಿ ಬಂದಿತ್ತು. ಅವನ ಗಮನವನ್ನೆಲ್ಲ ಸೆಳೆದಿದ್ದ ರಾಜಕೀಯ ಕ್ಷೇತ್ರವೇ ಅಂದು ಗೊಂದಲಗೆಟ್ಟಿತ್ತು. ಅವನ ಹಣಕಾಸಿನ ಸ್ಥಿತಿಯೂ ಚನ್ನಾಗಿರಲಿಲ್ಲ. ಅವನು ಬರೆದ 'ದಾರಿದ್ರ್ಯ' ಎಂಬ ಕವಿತೆಯು ಇದೇ ಕಾಲದಲ್ಲಿಯದು. ಅದೊಂದು ವಿಶಿಷ್ಟವಾದ ಕವಿತೆ. ಅದರಲ್ಲಿ ವಿಷಾದವೂ ಇದೆ ಪ್ರತಿಭಟನೆಯೂ ಇದೆ. ಅವನ ಚೇತನಕ್ಕೆ ಸ್ವಭಾವಿಕವಾಗಿದ್ದ ಉಲ್ಲಾಸವನ್ನು ಅದುಮುತ್ತಿದ್ದ ದಾರಿದ್ರ್ಯಕ್ಕಾಗಿ ವಿಷಾದ ; ಆ ಒತ್ತಡಕ್ಕೆ ಮಣಿಯಲೊಲ್ಲದ ಅವನ ಚೇತನದ ಪ್ರತಿಭಟನೆ ; ಅದು ಬೆಂಕಿಯ ಹೊಳೆಯಾಗಿ ಹರಿಯುವದೆಂದು ಕವಿಯು ಸಾರುತ್ತಾನೆ. ಅಂತೂ ಕವಿಯ ಪರಿಸ್ಥಿತಿ ಅಸಹನೀಯವಾಗಿತ್ತೆಂಬದು ಸ್ಪಷ್ಟವಿದೆ. ಕೃಷ್ಣಗರದಲ್ಲಿದ್ದು ಅದನ್ನು ಸುಧಾರಿಸಿಕೊಳ್ಳುವದು ಸಾಧ್ಯವಿರಲಿಲ್ಲವೆಂಬದು ಅವನಿಗೆ ಖಚಿತವಾಯಿತು. ಅಲ್ಲಿ ಅವನು ಬಡವರ ಮಕ್ಕಳಿಗಾಗಿ ಪಾಠಶಾಲೆಯೊಂದನ್ನು ನಡೆಸುತ್ತಿದ್ದನು. ಇಲ್ಲಿರುವಾಗಲೇ ಅವನು 'ಅಂತ್ರನಾಶೊನಾಲ್'

ಎಂಬ ಪ್ರಸಿದ್ಧವಾದ ಕಮ್ಯುನಿಸ್ಟ್ ಗೀತವನ್ನು ಬಂಗಾಲಿಗೆ ಅನುವಾದಿಸಿದನು. ಆದರೆ ಅವನ ಮಿತ್ರರಾರಿಗೂ ಅದರ ಸ್ವರಪ್ರಸ್ತಾರ ಗೊತ್ತಿರಲಿಲ್ಲವಾದ ಕಾರಣ ಅದನ್ನು ಸರಿಯಾಗಿ ಹಾಡಲಿಕ್ಕೆ ಬರುವಂತಿರಲಿಲ್ಲ.

ಕೊನೆಯಲ್ಲಿ, ನಜರುಲ್ ಹೂಗಲಿಯನ್ನು ಬಿಟ್ಟ ಎರಡೂವರೆ ವರ್ಷಗಳ ತರುವಾಯ ಕೃಷ್ಣನಗರವನ್ನು ಬಿಟ್ಟು ಕಲಕತ್ತೆಗೆ ಕುಟುಂಬ ಸಹಿತವಾಗಿ ಬಂದನು. ಅಂದಿನಿಂದ ಕಲಕತ್ತೆಯೇ ಅವನ ನೆಲೆಯಾಯಿತು. ಮೊದಲು ಅವನು ಪಟ್ಟಣದ ಮಧ್ಯಭಾಗದಲ್ಲಿ ಪಾನಬಜಾರ ಲೇನನಲ್ಲಿ ಮನೆ ಹೂಡಿದನು. ಕೆಲಕಾಲದ ನಂತರ ಅದನ್ನು ಬಿಟ್ಟು ಉತ್ತರ ಭಾಗಕ್ಕೆ ಹೋದನು. ತರುವಾಯದ ದಿನಗಳನ್ನೆಲ್ಲ ಅವನು ಹೆಚ್ಚಾಗಿ ಶಾಮಬಜಾರ ಬಾಗಬಜಾರ ಭಾಗಗಳಲ್ಲಿ ಕಳೆದನು. ಸನ್ 1960 ರ ಸುಮಾರಿಗೆ ಅವನನ್ನೂ ಅವನ ಮಗನನ್ನೂ ಪೂರ್ವಭಾಗದಲ್ಲಿಯ ಕ್ರಿಸ್ತೊಫರ ರಸ್ತೆಯಲ್ಲಿ ಸಿ. ಐ. ಟಿ. ಕಟ್ಟಡಗಳಲ್ಲಿ ಫ್ಲಾಟ ಒಂದಕ್ಕೆ ಸಾಗಿಸಬೇಕಾಯಿತು.

ಕೃಷ್ಣನಗರದಲ್ಲಿ ನಜರುಲ್ ರಾಜಕೀಯ ಜೀವನ ಉತ್ಕರ್ಷದಲ್ಲಿತ್ತು. ಅನೇಕ ಜನ ಕಮ್ಯುನಿಸ್ಟರು ಅವನ ಗೆಳೆಯರಾಗಿದ್ದರು. ಆದರೆ ಅವನು ಆ ಪಾರ್ಟಿಯ ಮೆಂಬರನಾಗಿರಲಿಲ್ಲ. ಅದಕ್ಕೆ ಕಾರಣವನ್ನು ತಿಳಿಯುವದೂ ಕಷ್ಟವಲ್ಲ. ಮಾರ್ಕ್ಸವಾದದ ಸಿದ್ಧಾಂತಗಳಲ್ಲಿ ಅವನಿಗೆ ಅಭಿರುಚಿಯಿರಲಿಲ್ಲ. ಆರ್ಥಿಕ ಸಾಮಾಜಿಕ ಸಂಶೋಧನಗಳಲ್ಲಿ ಅವನ ಮನಸು ಹರಿಯುತ್ತಿರಲಿಲ್ಲ, ರಾಜಕೀಯ ವಾದಪ್ರತಿವಾದಗಳಲ್ಲಿ ಅವನ ಆಸಕ್ತಿಯಿರಲಿಲ್ಲ. ಅವನ ಮಟ್ಟಿಗೆ ಕಮ್ಯುನಿಜಂ ಎಂದರೆ ಸೈಜವಾದ ಮಾನವೀಯತೆ, ದೀನರಿಗಾಗಿ ಅನುಕಂಪ, ಅದರಿಂದಾಗಿ ಬರುವ ರೋಷ ; ಮತ್ತು ಮುಂದೆ ನಾವು ಕಾಣುವಂತೆ ದೈವೀಪ್ರಭಾವದಲ್ಲಿ ವಿಶ್ವಾಸದ ಸೂಚನೆಯೂ ಅದರಲ್ಲಿ ಕಾಣುತ್ತಿತ್ತು. ಅವನು ಕಮ್ಯುನಿಸ್ಟನು ಅಹುದೋ ಅಲ್ಲವೋ, ಅವನಲ್ಲಿ ದೇಶಬಾಂಧವರಿಗಾಗಿ ಪ್ರೀತಿ, ಅವರ ಸ್ವಾತಂತ್ರ್ಯದಲ್ಲಿ ಆಸಕ್ತಿಗಳು ಆಳವಾಗಿದ್ದವು. ಅದರಿಂದಲೇ ಅವನನ್ನು 'ಜನತೆಯ ಕವಿ' ಎಂದು ಅವರು ಸರಿಯಾಗಿ ಗುರುತಿಸಿದ್ದರು. ತಪ್ಪಾಗಿಯಾದರೂ, ಸಾಮಾನ್ಯವಾಗಿ ಅವನೊಬ್ಬ ಕಮ್ಯುನಿಸ್ಟ ಕವಿ ಎಂದೂ ಭಾವಿಸಲಾಗಿತ್ತು.

ಸನ್ 1929 ರ ನಂತರ ಕಲಕತ್ತೆಯಲ್ಲಿ ನಜರುಲ್ ಜೀವನ ಹೊಸದೊಂದು ಪ್ರಪಂಚವನ್ನು ಪ್ರವೇಶಿಸಿತು. ಕ್ವಚಿತ್ತಾಗಿಯಷ್ಟೇ ಅದರಲ್ಲಿ ಕಾವ್ಯಾರಾಮಕ್ಕೆ ಅವಕಾಶವಿದ್ದಿತು. ಅದರಲ್ಲಿಯ ಮುಖ್ಯವಾದ ವ್ಯವಸಾಯ ಗಾಯನ ಮತ್ತು ಗೀತಗಳಿಗೆ ಸಂಬಂಧಿಸಿದ್ದಾಗಿತ್ತು. ಇದಕ್ಕೂ ಮೊದಲೇ ನಜರುಲ್ ಗದ್ಯ ಪದ್ಯ ಸಂಕಲನಗಳನ್ನು ಪ್ರಕಟಿಸಿದ್ದಲ್ಲದೆ ಅನೇಕ ಗೀತಸಂಕಲನಗಳನ್ನೂ ಪ್ರಕಟಿಸಿದ್ದನು : 'ಸಂಚಿತಾ' 1928 ಮತ್ತು 'ಚಕ್ರವಾಕ' 1929 ; ಇವಲ್ಲದೆ ಹದಿನಾಲ್ಕು ಕವಿತಾ ಸಂಕಲನಗಳನ್ನು ಪ್ರಕಟಿಸಿದ್ದನು. ಇವೇ ಅಲ್ಲದೆ ಇನ್ನೂ ಅನೇಕ ಕವಿತೆಗಳೂ ಹಾಡುಗಳೂ ಅವನ ನಿಷ್ಕಾಳಜಿತನದಿಂದಾಗಿ ಹಳೆಯ ಪತ್ರಿಕೆಗಳಲ್ಲಿಯೂ ಕೈಬರಹಗಳಲ್ಲಿಯೂ ಉಳಿದಿದ್ದವು. ಇವುಗಳನ್ನು ಮುಂದೆ ಎರಡು ಸಂಕಲನಗಳಾಗಿ ಪ್ರಕಟಿಸಲಾಯಿತು : 'ಸಂಚಯನ' 1955, ಮರುಭಾಸ್ಕರ 1957. ಇವೆರಡರ ಪ್ರಕಟನೆಯಲ್ಲಿ ನಜರುಲ್

ಕೈಯಿರುವದು ಸಾಧ್ಯವಿರಲಿಲ್ಲವೆಂಬದನ್ನೂ ಇಲ್ಲಿ ಹೇಳಬೇಕು. ಬಹುಶಃ 'ಸಂಧ್ಯಾ' (1929?) ಮತ್ತು 'ಪ್ರಲಯುಶಿಖಾ' (1939?) ಎರಡರ ಪ್ರಕಟನೆಯೊಡನೆಯೇ ಅವನ ಜವಾಬುದಾರಿಗೆ ಕೊನೆಯಾಯಿತೆಂದು ತೋರುತ್ತದೆ.

ನಜರುಲ್ ಕವಿತೆಗಳ ಮತ್ತು ಹಾಡುಗಳ ಮೊಟ್ಟಮೊದಲನೆಯ ಸಂಕಲನ 'ಸಂಚಿತಾ' ಬಗ್ಗೆ ಒಂದು ಮಾತು: ಸನ್ 1928ರಲ್ಲಿ ನಜರುಲ್‌ಗೆ ಹಣದ ಕೊರತೆ ತೀವ್ರವಾಗಿತ್ತು. ಆದ್ದರಿಂದ ಅವನು ದೂರದೃಷ್ಟಿ ಇಲ್ಲದೆ ಅಸಹಾಯ ಸ್ಥಿತಿಯಲ್ಲಿ ಈ ಸಂಕಲನದ ಎಲ್ಲ ಹಕ್ಕುಗಳನ್ನು ಕಲಕತ್ತೆಯ ಡಿ. ಎಮ್. ಲಾಯಬ್ರರಿಯವರಿಗೆ ಬರೀ ಮೂರು ಸಾವಿರ ರೂಪಾಯಿಗೆ ಮಾರಿಕೊಂಡನು. ಅದರ ನಂತರ ಈ ಸಂಕಲನದಿಂದ ಬಂದ ಎಲ್ಲ ಗಳಿಕೆ ಪ್ರಕಾಶಕನದೇ ಆಯಿತು. ಲೇಖಕನಿಗೆ ಚಿಕ್ಕಾಸೂ ಬರಲಿಲ್ಲ. ಆಗ ನಜರುಲ್ ಪ್ರಾಯ ಬರಿ ಮೂವತ್ತು ವರ್ಷ. ಅವನ ಪ್ರತಿಭೆ ಪರಾಕಾಷ್ಠೆಯಲ್ಲಿದ್ದ ಕಾಲ. ಆದರೆ ತಾನು ಅಗ್ಗದಲ್ಲಿ ಮಾರಿಬಿಡುತ್ತಿದ್ದುದರ ಬೆಲೆ ಏನೆಂಬದು ಅವನಿಗೆ ತಿಳಿಯಲಿಲ್ಲ. ಮತ್ತು ಹೀಗೆ ಮುನ್ನೆಚ್ಚರವಿಲ್ಲದೆ ಅವನು ವರ್ತಿಸಿದ್ದು ಇದೊಮ್ಮೆ ಮಾತ್ರವಲ್ಲ.

## 5. ಬಾಂದಳದ ಪಯಣಿಗ

ನಜರುಲ್‌ನ ಪ್ರತಿಭೆಯು ಹಿಡಿದ ದಾರಿ ಅನಿರೀಕ್ಷಿತವಾಗಿರದಿದ್ದರೂ ಅದು ಅವನನ್ನು ಮೂವತ್ತರ ದಶಕದಲ್ಲಿ ಅನಿರೀಕ್ಷಿತವಾದ ಕ್ಷೇತ್ರದಲ್ಲಿ ಅದೃಷ್ಟವನ್ನು ಕಾಣುವಂತೆ ಮಾಡಿತು. ಅವನೆದುರಿಗೆ ಬಾಗಿಲು ತೆರೆದದ್ದು ಸಂಗೀತ ಪ್ರಪಂಚದ್ದು. ರವೀಂದ್ರನಾಥ ಟಾಗೋರರಂತೆಯೇ ನಜರುಲ್ ಕೂಡ ಮೊದಲಿನಿಂದಲೂ ಸಂಗೀತಕ್ಕಾಗಿಯೇ ಹುಟ್ಟಿಬಂದವನಂತಿದ್ದನೆನ್ನಬಹುದು. ಅದು ಒಂದು ರೀತಿಯಲ್ಲಿ ಬಂಗಾಲದ ನೆಲದ ಗುಣವೇ ಎಂದರೂ ಸಲ್ಲುವದು. ಆದುದರಿಂದಲೇ ಬಂಗಾಲದ ಜಾನಪದ ಸಾಹಿತ್ಯ ಗೀತಗಳ ಸಂಪತ್ತಿ ಅಷ್ಟು ವಿಪುಲವಾಗಿದೆ; ಭಾವಗೀತೆಗಳೂ ಸಣ್ಣ ಕತೆಗಳೂ ಅಷ್ಟು ಸಮೃದ್ಧವಾಗಿ ಬೆಳೆದಿವೆ. ಭಾರತದ ಸಂಗೀತ ಪ್ರಪಂಚದಲ್ಲಿ 'ಬಾಂಗಲಾ ಗಾನ'ವೆಂಬದು ತನ್ನದೇ ವಿಶಿಷ್ಟವಾದ ಗುಣಗಳನ್ನು ಹೊಂದಿದೆ: (1) 'ಕಥಾ' ಎಂಬದು ಭಾವಪೂರ್ಣವಾದ ಶಬ್ದಗಳ ರಚನೆಯಾಗಿರುತ್ತದೆ; (2) 'ಸೂರ' ಎಂಬುದರಲ್ಲಿ ನವ್ಯವಾದ ಸ್ವರಸಂಯೋಜನೆಗಳು ಪರಂಪರಾಗತ ರಾಗಗಳೊಡನೆ ಸೇರಿಕೊಂಡು ಮಿಶ್ರಜಾತಿಗಳು ನಿರ್ಮಾಣ ಹೊಂದಿರುತ್ತವೆ; (3) ಒಟ್ಟಿನಲ್ಲಿ ಅದರ ಭಾವ ಬಂಧಗಳೆರಡೂ ಸಾಮಾನ್ಯ ಜನರ ಮನಮುಟ್ಟುವಂತಹವಿರುತ್ತವೆ.

ನಜರುಲ್ ತನ್ನ ಬಾಲ್ಯದಲ್ಲಿಯೇ ಒಂದು 'ಲೇತೋರ ದಲ'ದಲ್ಲಿ ಸೇರಿ ಅದರ ಕವಿಯೂ ಗಾಯಕನೂ ನಾಯಕನೂ ಆಗಿದ್ದನೆಂಬದನ್ನು ಈ ಮೊದಲೇ ಹೇಳಿದ್ದೇವೆ. ಅದಕ್ಕಾಗಿ ಅವನು 'ಕಥಾ' ಬರೆದು ಅವುಗಳಿಗೆ ಸರಿಯಾದ 'ಸೂರ' ಹೊಂದಿ

ನುತ್ತಿದ್ದನು. ಕೊಳಲು ಮುಂತಾದ ವಾದ್ಯಗಳನ್ನು ಅವನು ಸರಳವಾಗಿ ಸುಲಲಿತ ವಾಗಿ ನುಡಿಸಬಲ್ಲವನಾಗಿದ್ದನು. ಸಿಯರಸೋಲ ರಾಜರ ಹೈಸ್ಕೂಲಿನಲ್ಲಿ ಅವನ ಅಧ್ಯಾಪಕನಾಗಿದ್ದ ಸತೀಶಚಂದ್ರ ಕಾಂಜೇಲಾಲ ಅವನ ಈ ಕೌಶಲ್ಯಗಳನ್ನು ಗಮನಿ ಸಿದ್ದನು. ಸತೀಶಚಂದ್ರನು ಅಭಿಜಾತ ಸಂಗೀತವನ್ನು ಚನ್ನಾಗಿ ತಿಳಿದವನಾಗಿದ್ದನು. ನಜರುಲ್‌ನ ಸಹಜ ಪ್ರತಿಭೆಯನ್ನು ಚನ್ನಾಗಿ ರೂಪಿಸಿ ಅದಕ್ಕೊಂದು ಸರಿಯಾದ ಆಧಾರವನ್ನು ಹಾಕಿಕೊಡುವದಕ್ಕೆ ಇದರಿಂದ ಸಾಧ್ಯವಾಯಿತು. ಸತೀಶಚಂದ್ರನಿಂದ ಅವನು ಕಲಿತದ್ದು ನಜರುಲ್‌ನ ಕೃತಿರಚನೆಯಲ್ಲಿ ಉದ್ದಕ್ಕೂ ಅವನಿಗೆ ಸಹಾಯ ವಾಗುತ್ತಿತ್ತು. ಮುಂದೆ ಅವನು ಕರಾಚಿಯಲ್ಲಿದ್ದಾಗ ಬೇರೆ ಬೇರೆ ಪದ್ಧತಿಗಳನ್ನೂ ರೂಢಿಸಿಕೊಳ್ಳುವ ಅವಕಾಶ ದೊರೆಯಿತು. ಬರಾಕುಗಳಲ್ಲಿ ಅವನ ಜತೆಗಾರರಾಗಿದ್ದವ ರಿಗೆ ಅವನ ಸಹವಾಸ ಆಹ್ಲಾದಕರವಾಗಿರುತ್ತಿತ್ತು. ಅವರಿಂದಲೂ ಅವನು ಅನೇಕ ನವ್ಯಶೈಲಿಗಳನ್ನೂ, ಪಂಜಾಬಿ ಮತ್ತು ಇತರ ಧಾಟಿಗಳನ್ನೂ ಕಲಿತನು. ಬಹುಶಃ ಅವನು ಸ್ವಲ್ಪಮಟ್ಟಿಗೆ ಅರಬದೇಶಗಳ ಸಂಗೀತದ ಪರಿಚಯವನ್ನೂ ಪಡೆದನೆಂದು ತೋರುತ್ತದೆ.

ಒಟ್ಟಿನಲ್ಲಿ ನಜರುಲ್ ಕಲಕತ್ತೆಗೆ ಮರಳಿ ಬರುವ ಹೊತ್ತಿಗೆ ಅಲ್ಲಿಯ ನಾನಾ ತರದ ಸಾಹಿತ್ಯ ಸಂಗೀತ ಸಮಾಜಗಳಲ್ಲಿ ಅವನಿಗೆ ಹಾರ್ದಿಕವಾದ ಸ್ವಾಗತವು ದೊರೆಯುವದಕ್ಕೆ ಬೇಕಾದ ಎಲ್ಲ ಕೌಶಲ್ಯಗಳನ್ನೂ ಅವನು ಪಡೆದಿದ್ದನು. ಅವನು ಉತ್ಸಾಹಿಯಾದ ಗಾಯಕನಾಗಿದ್ದನಲ್ಲದೆ ತನ್ನವೇ ಗೀತಗಳನ್ನು ರಚಿಸಬಲ್ಲವ ನಾಗಿದ್ದನು. ಬೇರೆಯವರ ಗೀತಗಳಿಗೆ ಬೆರಗುಗೊಳಿಸುವಂತಹ ಹೊಸ ಸ್ವರ ಸಂಯೋಜನೆ ಮಾಡುತ್ತಿದ್ದನು. ಅವನ ಕವಿತಾಶಕ್ತಿಗಿಂತ ಹೆಚ್ಚಾಗಿ ಅವನ ಗಾಯನ ಪ್ರತಿಭೆಯು ಹೋದಹೋದಲ್ಲೆಲ್ಲ ಅವನಿಗಾಗಿ ಬಾಗಿಲುಗಳನ್ನು ತೆರೆಯಿಸುತ್ತಿದ್ದಿತು. ಕಲಕತ್ತೆಯಲ್ಲಲ್ಲದೇ ಸಮಸ್ತ ಬಂಗಾಲದಲ್ಲಿ ಅವನ ಜನಪ್ರಿಯತೆ ಹೆಚ್ಚಿತು. ಅವನ ಶಾರೀರ ಹೇಳಿಕೊಳ್ಳುವಂತಹದ್ದಿರಲಿಲ್ಲ. ಅದರಲ್ಲಿ ಬಲ ಸಾಕಷ್ಟಿದ್ದರೂ ನಯ ಸಾಲ ದಾಗಿತ್ತು. ಆದರೂ ಅವನು ಜನರ ಮನವನ್ನು ಸೂರೆಗೊಳ್ಳುತ್ತಿದ್ದುದು ತನ್ನ ತೇಜಸ್ಸು ಮತ್ತು ಉತ್ಸಾಹದಿಂದ. ಯಾವ ಕೃತಿಯನ್ನೇ ಆದರೂ ಅನಾಯಾಸವಾಗಿ, ನೈಜವಾಗಿ, ಶಕ್ತಿಯುತವಾಗಿ ಸಮರ್ಪಿಸುವ ಅವನ ರೀತಿ ಸರ್ವರಿಗೂ ಪ್ರಿಯ ವಾಗಿತ್ತು.

ಶ್ರೇಷ್ಠವಾದ ಎಲ್ಲ ಕಲೆಯಲ್ಲಿ ಇರುವಂತೆಯೇ ಅವನ ಹಾಡುಗಳಲ್ಲಿ ದುರ್ದಮ್ಯ ವಾದ ಆಕರ್ಷಣವೊಂದಿರುತ್ತಿದ್ದಿತು. ಮೊದಲನೆಯದಾಗಿ ಅವುಗಳ ಸಹಜತೆ ಮತ್ತು ಉಲ್ಲಾಸ. ಎರಡನೆಯದಾಗಿ ಅನನ್ಯಸಾಧಾರಣವಾದ ಹೊಚ್ಚ ಹೊಸ ಕಲ್ಪನಾ ವಿಲಾಸ. ಕೊನೆಯದಾಗಿ ಅಲೌಕಿಕವಾದ ಶಕ್ತಿಯುತವಾದ ಭಾವ ರಾಗ ಶಬ್ದಗಳ ಬೆಸುಗೆ. ಇವಿರಲಿಲ್ಲವಾಗಿದ್ದರೆ, ರವೀಂದ್ರ ಸಂಗೀತದ ಸವಿಯನ್ನುಂಡ ಬಂಗಾಲಿ ಜನತೆಯು ನಜರುಲ್ ಕೃತಿಗಳನ್ನು ಅಷ್ಟು ಧಾರಾಳವಾಗಿ ಮೆಚ್ಚಿಕೊಳ್ಳುವದು ಸಾಧ್ಯವಿರಲಿಲ್ಲ. ಸ್ವತಃ ಟಾಗೋರರೇ ನಜರುಲ್‌ನ ಪ್ರತಿಭೆಯನ್ನು ಗುರುತಿಸಿ ಅವನು ಶಾಂತಿನಿಕೇತನಕ್ಕೆ ಬರಬೇಕು ಮತ್ತು ಗಾನದೇವತೆಯ ಆ ಆಸ್ಥಾನದಲ್ಲಿದ್ದು ತನ್ನ

ಸಹಜಪ್ರತಿಭೆಗೆ ಪರಿಷ್ಕಾರದ ಒಪ್ಪಹಾಕಬೇಕು ಎಂದು ಬಯಸಿದ್ದರು. ಆದರೆ ನಜರುಲ್‌ನ ಸ್ವತಂತ್ರ ವೃತ್ತಿಗೆ ಇದು ಹಿಡಿಸಲಿಲ್ಲ. ಮತ್ತು ಅಂದಿನ ಸ್ವಾತಂತ್ರ್ಯ ಚಳುವಳಿಯೂ ರಾಜಕೀಯದ ಪ್ರಪಂಚವೂ ಅವನನ್ನು ಬಲವಾಗಿ ಸೆಳೆದವು. ಆ ಕಾಲದಲ್ಲಿ (1921-23) ಸೇರುತ್ತಿದ್ದ ರಾಜಕೀಯ ಸಭೆಗಳಲ್ಲಿ ಬಿರುಗಾಳಿಯೆಬ್ಬಿಸುವದಕ್ಕೆ ನಜರುಲ್‌ನ ಸ್ವಂತ ಪ್ರತಿಭೆ ಕೌಶಲಗಳೇ ಸಾಕಷ್ಟಿದ್ದವು. ಸನ್ 1922 ರಿಂದ 1928 ವರೆಗೆ ನಜರುಲ್ ರಚಿಸಿದ ರಾಷ್ಟ್ರೀಯ ಗೀತಗಳ ಬಲ ಉತ್ಸಾಹಗಳನ್ನು ಈ ಮೊದಲೇ ವರ್ಣಿಸಿದ್ದಾಗಿದೆ.

ಇವುಗಳ ಜತೆಯಲ್ಲಿಯೇ ಅವನು ಬೇರೆತರಹದ ಹಾಡುಗಳನ್ನು ಬರೆದನೆಂಬುದನ್ನೂ ಗಮನಿಸಬೇಕು; ಪ್ರೇಮಗೀತಿ, ಪ್ರಕೃತಿಗೀತಿ ಮುಂತಾದವು. ಇಷ್ಟರಲ್ಲಿಯೇ ನಜರುಲ್ ಬಂಗಾಲೀ ಸಂಗೀತ ಪ್ರಾಸಾದಕ್ಕೆ ತನ್ನದೇ ಒಂದು ಹಜಾರವನ್ನು ಜೋಡಿಸತೊಡಗಿದ್ದನು: ಅದೇ ಗಜಲ. ಗಜಲ ಮೂಲದಲ್ಲಿ ಪರ್ಷಿಯಾ ದೇಶದಿಂದ ಬಂದದ್ದು. ಭಾರತದಲ್ಲಿ ಉರ್ದು ಕಾವ್ಯ ಅದನ್ನು ಬಳಸಿಕೊಂಡಿತ್ತು. ಅದರ ಬಹು ಸುಂದರವಾದ ಒಂದು ರೀತಿಯನ್ನು ಹಿಂದೂಸ್ತಾನಿ ಸಂಗೀತವು ರೂಪಿಸಿದ್ದಿತು. ಅದನ್ನು ಬಂಗಾಲೀ ಸಂಗೀತದಲ್ಲಿ ಮೊದಲು ಬಳಸಿದವನು ನಜರುಲ್. ಗಜಲ್ ಪ್ರಕಾರದ ಪರಿಷ್ಕೃತ ಮನೋಧರ್ಮಕ್ಕೆ ಹೊಸದೊಂದು ಬಲವನ್ನು ತುಂಬುವಂತಹ ಶಬ್ದಕೌಶಲ ನಜರುಲ್ಲನಿಗಿತ್ತು. ಇದರಿಂದಾಗಿ ಸನ್ 1926ರ ಹೊತ್ತಿಗೆ ಬಂಗಾಲಿ ಸಂಗೀತದಲ್ಲಿ ನಜರುಲ್ ಒಬ್ಬ ಸ್ವತಂತ್ರ ಮಾರ್ಗದ ಪ್ರವರ್ತಕನೆಂದು ಹೆಸರು ಪಡೆದಿದ್ದನು. ಸನ್ 1928ರ ಹೊತ್ತಿಗೆ ಅವನ ಸಾಮರ್ಥ್ಯವನ್ನು ಯಾರೂ ಅಲ್ಲಗಳೆಯುವಂತಿರಲಿಲ್ಲ. ಅವನ ಗೀತಗಳ ಮೊದಲನೆಯ ಸಂಕಲನ ಬುಲ್‌ಬುಲ್. ಅದು ಪ್ರಕಟನೆಗಾಗಿ ಬಹುಕಾಲ ಕಾದಿದ್ದು 1928ರಲ್ಲಿ ಹೊರಬಂದಿತು. ಅದರ ಬೆನ್ನ ಹಿಂದೆಯೇ 1929ರಲ್ಲಿ 'ಚೋಖೇರ ಚಾತಕ' (ಪ್ರೇಮಾತುರವಾದ ಚಾತಕ) 1930ರಲ್ಲಿ 'ನಜರುಲ್ ಗೀತಿಕಾ' ಎಂಬ ಸಂಕಲನಗಳೂ ಬಂದವು. ಇವು ಹೊರಬರುತ್ತಿದ್ದಂತೆಯೇ ಈ ಹಾಡುಗಳು ಬಂಗಾಲವನ್ನೆಲ್ಲ ವ್ಯಾಪಿಸಿದವು. ನಜರುಲ್ ಈಗ ಶೆಲ್ಲಿ ಕವಿಯ ಸ್ಕಾಯ್‌ಲಾರ್ಕನಂತೆ ಶುಭ್ರವಾದ ಅಂತರಿಕ್ಷದಲ್ಲಿ ವಿಹರಿಸುವಂತಾಯಿತು.

ಇದಕ್ಕೊಂದು ಹಿನ್ನೆಲೆಯೂ ಇದೆ. ಸನ್ 1928 ವರೆಗೆ ನಜರುಲ್ ಬರೆದ ಗದ್ಯ ಪದ್ಯಗಳಿಂದ ಅವನಿಗೆ ಹೇಳಿಕೊಳ್ಳುವಂತಹ ಆದಾಯ ಬಂದಿರಲಿಲ್ಲ. ಇದಕ್ಕೆ ಸ್ವಲ್ಪ ಮೊದಲು ಬ್ರಿಟನ್ ದೇಶದ ಗ್ರಾಮೋಫೋನ ಕಂಪನಿಯೊಂದು ಭಾರತದಲ್ಲಿ ತನ್ನ ವ್ಯಾಪಾರವನ್ನು ವಿಸ್ತರಿಸುವ ಹವಣಿಕೆಯಲ್ಲಿದ್ದಿತು. ಕಲಕತ್ತೆಯಲ್ಲಿ 'ರೇಡಿಯೋ ಕಂಪನಿ' ಎಂಬ ಖಾಸಗಿ ಸಂಸ್ಥೆಯು ಕಾಲೂರುವದಕ್ಕೆ ಒದ್ದಾಡುತ್ತಿತ್ತು. ಚಲನ ಚಿತ್ರ ಸಂಗೀತ ಇನ್ನೂ ಪ್ರಚಾರದಲ್ಲಿರಲಿಲ್ಲ. ಬ್ರಿಟನ್ನಿನ ಗ್ರಾಮೊಫೋನ ಕಂಪನಿಯವರಿಗೆ 'ಬಿದ್ರೋಹಿ ಕವಿ'ಯ ಹಾಡುಗಳಲ್ಲಿಯ ರಾಜಕೀಯದ ತಿರುಳು ತಿಳಿದಿರಲಿಲ್ಲವೆಂಬಂತಿರಲಿಲ್ಲ. ಆದರೆ ನಜರುಲ್‌ನ ಸಾಮ್ರಾಜ್ಯ ವಿರೋಧಿ ಧೋರಣೆಯ ಬಗ್ಗೆ ಅವರಿಗಿದ್ದ ಅಸೂಯೆಗಿಂತ ಲಾಭದಾಯಕವಾದ ವ್ಯಾಪಾರವನ್ನು ಬೆಳೆಯಿಸುವ ಅವರ ಆಶೆ ಬಲವಾಯಿತು.

ಆ ವ್ಯಾಪಾರ ಆರಂಭವಾದದ್ದು ಹೀಗೆ: ಆ ಕಂಪನಿಯವರಿಗೆ (H M V) ತಿಳಿಯದಂತೆಯೇ ದಿ. ಹರೇನ ಘೋಷ ಎಂಬ ಅಂದಿನ ಪ್ರಸಿದ್ಧ ಸಂಗೀತಕಾರನು ಅವರಿಗಾಗಿ ಮಾಡಿದ ಒಂದು ರಿಕಾರ್ಡಿನಲ್ಲಿ ನಜರುಲ್‌ನ ಎರಡು ಹಾಡುಗಳನ್ನು ಸೇರಿಸಿದನು. ಆ ರಿಕಾರ್ಡಿಗೆ ಪೇಟೆಯಲ್ಲಿ ಘನವಾದ ಬೇಡಿಕೆ ಉಂಟಾಯಿತು. H M V ಕಂಪನಿಗೆ ಇದರ ಸವಿ ಹತ್ತಿತು. ಹೆಚ್ಚೆಚ್ಚಾಗಿ ನಜರುಲ್ ಗೀತಗಳ ರಿಕಾರ್ಡುಗಳು ಹೊರಬರಹತ್ತಿದವು. ಮೊದಮೊದಲು ಕಂಪನಿಯ ಕೆಲಸದಲ್ಲಿದ್ದ ಗಾಯಕರೇ ಅವುಗಳನ್ನು ಹಾಡುತ್ತಿದ್ದರು. ಆ ಮೇಲೆ ಸ್ವತಃ ನಜರುಲ್‌ನನ್ನೇ ಕರೆಯತೊಡಗಿದರು. ಇದರಿಂದ ನಜರುಲ್‌ಗೆ ಬರತೊಡಗಿದ ಆದಾಯವು, ಅವನು ಪುಸ್ತಕ ಪ್ರಕಟನೆಗಳಿಂದ ಗಳಿಸುತ್ತಿದ್ದ ಆದಾಯಕ್ಕೆ ಹೋಲಿಸಿದರೆ, ಘನವಾದು ದಾಗಿತ್ತು. ನಜರುಲ್‌ನ ಮತ್ತು ಅವನ ರಿಕಾರ್ಡುಗಳ ಜನಪ್ರಿಯತೆ ಬೆಳೆಯುತ್ತಿದ್ದು ದನ್ನು ಕಂಡು ಕಂಪನಿಯವರು ಅವನನ್ನು ತಮ್ಮ ಕೆಲಸದಲ್ಲಿಯೇ ನಿಲ್ಲಿಸಿಕೊಂಡರು. ನಜರುಲ್ ಘನತೆ ಅವರಿಗೆ ಅರ್ಥವಾಗಿ ಅವನನ್ನು ಕಂಪನಿಯವರು ಬಹು ಗೌರವ ದಿಂದ ಕಾಣತೊಡಗಿದರು. ಈ ಸಂಬಂಧ ನಜರುಲ್‌ನಿಗೂ ಅಪ್ರಿಯವೆನ್ನುವಂತಿರಲಿಲ್ಲ. ಸಂಗೀತವಂತೂ ಎಂದಿಗೂ ಅವನಿಗೆ ಪ್ರಿಯವಾದದ್ದೇ ಮತ್ತು ಇಂದಿನವರೆಗೆ ಅವನಿಗೆ ಲಭ್ಯವಾಗದೇ ಹೋಗಿದ್ದ ಹಣವು ಈಗ ಹರಿದು ಬರುತ್ತಿರುವದು ಅವನಿಗೆ ಇಷ್ಟ ವಾದದ್ದು ಸಹಜವಾಗಿತ್ತು. ಕಂಪನಿಯವರು ತಮ್ಮ ಕೆಲಸದಲ್ಲಿರಿಸಿಕೊಂಡಿದ್ದ ವಿದ್ವಾಂಸ, ಉಸ್ತಾದ ಜಿಯಾಉದ್ದೀನ ಖಾನರಿಂದ ನಜರುಲ್‌ನು ಸಲಹೆಗಳನ್ನು ಪಡೆದು ತನ್ನ ಕೌಶಲ್ಯಗಳನ್ನು ಹೆಚ್ಚಿಸಿಕೊಳ್ಳಬಹುದೆಂದು ಕಂಪನಿಯವರು ಸೂಚಿಸಿ ದರು. ಇದು ನಜರುಲ್‌ಗೆ ಇಷ್ಟವಾದದ್ದೇ ಆಗಿತ್ತು. ಈ ಸೌಲಭ್ಯದಿಂದ ನಜರುಲ್ ಅಭಿಜಾತ ಸಂಗೀತದಲ್ಲಿ ಒಳ್ಳೆಯ ತರಬೇತಿಯನ್ನು ಪಡೆದನು. ಅವರಿಬ್ಬರಲ್ಲೂ ಗಾಢ ವಾದ ಸ್ನೇಹ ಬೆಳೆಯಿತು. ನಜರುಲ್ ತನ್ನ 'ಬನಗೀತಿ' (1932) ಎಂಬ ಸಂಕಲನ ವನ್ನು ಉಸ್ತಾದ ಜಿಯಾಉದ್ದೀನ ಖಾನನಿಗೆ ಅರ್ಪಿಸಿದನು. ನಜರುಲ್ ಸಂಗೀತದಲ್ಲಿ ಎಲ್ಲಿಯವರೆಗೆ ಪ್ರಾವೀಣ್ಯವನ್ನು ಪಡೆದನೆಂದರೆ ಉಸ್ತಾದ ಜಿಯಾಉದ್ದೀನ್ ಖಾನ ತೀರಿದ ತರುವಾಯ ಅವನ ಸ್ಥಳದಲ್ಲಿ H M V ಕಂಪನಿಯವರು ನಜರುಲನನ್ನೇ ತಮ್ಮ ಕಂಪನಿಯ ಮುಖ್ಯ ಸಂಗೀತ ಶಿಕ್ಷಕನೆಂದೂ ಮುಖ್ಯ ಗೀತಲೇಖಕನೆಂದೂ ನಿಯಮಿಸಿಕೊಂಡರು. ಇದಲ್ಲದೆ ಬೇರೆ ಗ್ರಾಮೊಫೋನ ಕಂಪನಿಗಳವರೂ, ರೇಡಿಯೋ ಮತ್ತು ಚಲನಚಿತ್ರ ನಿರ್ಮಾಪಕರೂ ನಜರುಲನ ಪ್ರಾವೀಣ್ಯವನ್ನು ಗುರುತಿಸಿ ಅವನಿಂದ ಪ್ರಯೋಜನ ಪಡೆದರು.

ನಜರುಲ್‌ಗೆ ಬಂದ ಅಧಿಕಾರ ಹಣಗಳನ್ನು ಅವನು ಚನ್ನಾಗಿ ಬಳಸಿಕೊಂಡನು. ಅದೃಷ್ಟ ಪರಿಶ್ರಮಗಳೆರಡೂ ಜತೆಯಾಗಿ ಉಲ್ಲಾಸದಿಂದ ದಿನಗಳು ಕಳೆಯತೊಡಗಿ ದವು. ಅಂತಹ ಶ್ರೀಮಂತಿಕೆಯನ್ನು ಕಲಾವಿದರು ಕಾಣುವುದು ಆ ಕಾಲದಲ್ಲಿ ಅಪರೂಪವಾಗಿತ್ತು. ಅವನು ಒಂದು ಹೊಚ್ಚ ಹೊಸ 'ಕ್ರಿಸ್‌ಲರ' ಗಾಡಿಯನ್ನು ಕೊಂಡನು. ಅವನ ಗೆಳೆಯರೆಲ್ಲರೂ ಖುಷಿಯಿಂದ ಅವನ ಜತೆಗೆ ಕಾರಿನಲ್ಲಿ ಓಡಾಡು ತ್ತಿದ್ದರು. ಅದರಿಂದ ನಜರುಲ್‌ನಿಗೂ ಅವರಿಗಾದಷ್ಟೇ ಸಂತೋಷವಾಗುತ್ತಿತ್ತು.

ಅಂದಿನ ಮಾನದಿಂದ ಬಡವನೆನಿಸಿದ್ದ ಕಾಲದಲ್ಲಿಯೇ ತನ್ನ ಉಲ್ಲಾಸ, ಧೈರ್ಯ, ಔದಾರ್ಯಗಳಿಗಾಗಿ ಹೆಸರಾಗಿದ್ದ ನಜರುಲ್ ಈಗಂತೂ ಮೇಲಿಂದ ಮೇಲೆ ಔತಣಗಳನ್ನೂ ಪಾನಗೋಷ್ಠಿಗಳನ್ನೂ ಏರ್ಪಾಡು ಮಾಡುವದು ಸಹಜವೇ ಆಗಿತ್ತು. ತನ್ನ ಕೈಯಲ್ಲಿಯ ಕೊನೆಯ ಕಾಸು ತೀರುವವರೆಗೂ ಅವನು ಇದನ್ನು ಮಾಡುತ್ತಲೇ ಇದ್ದನು. ಅಗತ್ಯಬಿದ್ದಾಗ ಮತ್ತೆ ಬೇಕಾದಷ್ಟು ಗಳಿಸಬಲ್ಲೆನೆಂಬ ಆತ್ಮ ವಿಶ್ವಾಸ ಅವನದಾಗಿತ್ತು.

ಆದರೆ ಅದೃಷ್ಟದ ಈ ಚಲ್ಲಾಟ ಬಹುಕಾಲ ನಡೆಯಲಿಲ್ಲ. ಇದಕ್ಕೆ ಬಿದ್ದ ಮೊದಲನೆಯ ಹೊಡೆತವು ದಾರುಣವಾಗಿದ್ದಷ್ಟೇ ಅನಿರೀಕ್ಷಿತವೂ ಆಗಿತ್ತು. ಅದೇ ಅವನ ಹಿರಿಯ ಮಗು ಬುಲ್ ಬುಲ್ ಮರಣ (7-8 ಮೇ 1934). ಕೇವಲ ಮೂರುವರೆ ವರ್ಷದ ಆ ಮಗು ಭಯಂಕರವಾದ ಮೈಲೀಬೇನೆಗೆ ಬಲಿಯಾಯಿತು. ಬಹು ಚುರುಕಾಗಿದ್ದ ಆ ಮಗುವನ್ನು ಮನೆಯವರೆಲ್ಲ ಮುದ್ದಿನಿಂದ ಬೆಳೆಸಿದ್ದರು. ಈ ಅಪಘಾತವು ತಂದೆಯ ಜೀವನದಲ್ಲಿ ಒಂದು ಘಟ್ಟವಾಗಿ ಪರಿಣಮಿಸಿತು. ಈ ಹೊಡೆತದಿಂದ ನಜರುಲ್ ಕೊನೆಯವರೆಗೂ ಚೇತರಿಸಿಕೊಳ್ಳಲಿಲ್ಲ. ನಜರುಲ್ ಜೀವನ ಮತ್ತು ಕೃತಿಗಳಲ್ಲಿ ಇದರಿಂದಾದ ಪರಿಣಾಮಗಳನ್ನು ಮುಂದೆ ಆಗಾಗ ಹೇಳಬೇಕಾಗುವದು. ಅವನ ಕಲ್ಪಕಶಕ್ತಿ ಇದರಿಂದ ಕುಂಠಿತವಾಗಲಿಲ್ಲ. ಆದರೆ ಅದು ಬೇರೆ ದಾರಿಗಳನ್ನೂ ಬೇರೆ ಗುರಿಗಳನ್ನೂ ಹುಡುಕತೊಡಗಿತು. ಮರಣ, ಪುನರ್ಜನ್ಮ, ಧರ್ಮ, ರಹಸ್ಯ ವಿದ್ಯೆಗಳು, ಅವನ ಚಿಂತನೆಗೆ ವಿಷಯಗಳಾದವು. ಸಂಗೀತವೊಂದು ಬಹುಕಾಲ ಅಂದರೆ 1942 ರಲ್ಲಿ ಅವನ ಮನಸ್ಸು ಕುಸಿದು ಬೀಳುವವರೆಗೂ ಅವನ ಸಂಗಾತಿಯಾಗಿತ್ತು.

ಸಂಗೀತದಲ್ಲಿ ಅವನವಾಗಿದ್ದ ಸಹಜಸ್ಫೂರ್ತಿ ಮತ್ತು ವೈವಿಧ್ಯಗಳಿಂದ ಅವನನ್ನು ಕೆಲಸದಲ್ಲಿರಿಸಿಕೊಂಡವರಿಗೆ ಅಪಾರ ಲಾಭ ಬಂದಿತು. ಆದರೆ ಇನ್ನೊಂದು ರೀತಿಯಲ್ಲಿ ಅವನ ಈ ವಿಶಿಷ್ಟಗುಣಗಳು ತಮ್ಮ ಅಪವ್ಯಯಕ್ಕೆ ತಾವೇ ಕಾರಣವಾಗಿದ್ದಂತೆಯೂ ತೋರಿತು. ಒತ್ತಟ್ಟಿಗೆ ಬುಲ್‌ಬುಲನ ಮರಣದಿಂದಾದ ಆಘಾತ, ಇನ್ನೊತ್ತಟ್ಟಿಗೆ ದಿನ ನಿತ್ಯದ ಕೆಲಸದಲ್ಲಿ ಕಂಪನಿಯವರಿಂದ ಬರುತ್ತಿದ್ದ ಒತ್ತಾಯ, ಎರಡೂ ಸೇರಿ ಒಮ್ಮೊಮ್ಮೆ ತೀರಾ ಸಾಮಾನ್ಯವಾದ ಕೃತಿಗಳು ಹೊರಬರುವಂತೆ ಮಾಡುತ್ತಿದ್ದವು. ಎಷ್ಟೋ ಸಲ ನಜರುಲನಾಗಲಿ ಕಂಪನಿಯವರಾಗಲಿ ಅವನು ತಡೆಯಿಲ್ಲದೇ ನಿರ್ಮಿಸುತ್ತಿದ್ದ ಕೃತಿಗಳ ಲೆಕ್ಕವನ್ನೇ ಇಡುತ್ತಿರಲಿಲ್ಲ. ಅವನು ರಿಕಾರ್ಡ ಮಾಡಿದ ಹಾಡುಗಳ ವ್ಯವಸ್ಥಿತವಾದ ಸಂಗ್ರಹವಂತೂ ಹೋಗಲಿ ಒಂದು ಅನುಕ್ರಮಣಿಕೆಯನ್ನು ಸಹ ಇಟ್ಟಿರಲಿಲ್ಲ. ಹೀಗಾಗಿ, ನಜರುಲ್ ರಚಿಸಿ ಸ್ವರಸಂಯೋಜನೆ ಮಾಡಿದ ಸುಮಾರು 3500 ಹಾಡುಗಳಲ್ಲಿ ಸುಮಾರು ಎರಡು ಸಾವಿರದಷ್ಟು ಹಾಡುಗಳು ಸುಲಭವಾಗಿ ದೊರೆಯುವಂತಿಲ್ಲ. ಬುಲ್‌ಬುಲ್ (1928) ಚೋಖೇರ ಚಾತಕ (1929) ನಜರುಲ್ ಗೀತಿಕಾ (1930) ಸೂರಸಾಕೀ (1931) ಝುಲ್‌ಫಿಕಾರ (1932) ಬನಗೀತಿ (1932) ಗುಲಬಾಗಿಚಾ (1933) ಗಿರಿಶತದಲ (1934) ಸೂರಮಹಾಲ (1934) ಗಾನೇರ ಮಾಲಾ (1934) ಮುಂತಾದ ಅಚ್ಚಾದ ಸಂಕಲನಗಳಲ್ಲಿ ದೊರೆಯುವ ಕೃತಿಗಳು

ಅವನು ರಚಿಸಿದ ಅಸಂಖ್ಯ ಕೃತಿಗಳ ಮೊತ್ತದ ಒಂದು ಅಂಶ ಮಾತ್ರ. ರಾಷ್ಟ್ರೀಯ ಗೀತಗಳಲ್ಲಿ ಜನತೆಯ ಬಾಯಲ್ಲಿ ಉಳಿದು ಬಂದುವನ್ನು ಬಿಟ್ಟರೆ ಇನ್ನೆಲ್ಲವೂ ನಿರ್ಲಕ್ಷಿಸಲ್ಪಟ್ಟು ಮರೆತುಹೋಗಿವೆ. ನಜರುಲ್‌ನ ಎಲ್ಲ ಗೀತಗಳನ್ನು ಸಂಗ್ರಹಿಸುವದಕ್ಕೆ ಇಲ್ಲಿಯವರೆಗೆ ಮಾಡಲಾದ ಪ್ರಯತ್ನಗಳು ವ್ಯವಸ್ಥಿತವಾಗಿ ನಡೆದಿಲ್ಲ. ದಿನಗಳೆದಂತೆ ಕಳೆದು ಹೋದುವನ್ನು ಹುಡುಕುವದು ಸುಲಭವಾಗುವದಿಲ್ಲ. ಕೆಲ ಕಾಲದ ಹಿಂದೆ ಅಜಹರುದ್ದೀನಖಾನ ಎಂಬವರು ಕಷ್ಟಸಾಧ್ಯವಾದ ಸ್ತುತ್ಯವಾದ ಯತ್ನಗಳಿಂದ ಸುಮಾರು ಹದಿನಾರು ಹದಿನೇಳು ನೂರು ಹಾಡುಗಳ ಮೊದಲ ಪಂಕ್ತಿಗಳ ಅನುಕ್ರಮಣಿಕೆಯೊಂದನ್ನು ಕಲೆಹಾಕಿದರು. ತರುವಾಯದಲ್ಲಿ ಅದನ್ನು ಪೂರ್ತಿಗೊಳಿಸುವ ಯತ್ನವನ್ನೂ ಯಾರೂ ಕೈಕೊಂಡಿಲ್ಲ.

ನಜರುಲ್ ಕೃತಿಗಳ ಮೊತ್ತ (3500) ಅಗಾಧವಾಗಿರುವುದಲ್ಲದೆ ಅವುಗಳ ವೈವಿಧ್ಯವೂ ವಿಸ್ಮಯಗೊಳಿಸುವಂತಿದೆ, ವಸ್ತುಗಳ ಆಯ್ಕೆಯೂ ಧಾಟಿಗಳ ವಿಸ್ತಾರವೂ ಅಂತೆಯೇ ಅಪಾರವಾಗಿವೆ. ವಸ್ತುಗಳಿಗನುಗುಣವಾಗಿ ಅವನ ಒಟ್ಟು ಕೃತಿಗಳನ್ನು ಹೀಗೆ ವಿಂಗಡಿಸಬಹುದು :

(1) ಸ್ವದೇಶೀಗಾನ : ಇದರಲ್ಲಿ ಕೇವಲ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದುವಲ್ಲದೆ ಉಳಿದ 'ಜಾನಪದಿಕ' ಅಂದರೆ ರಾಜಕೀಯ ಸಾಮಾಜಿಕ ವಿಷಯಗಳಿಗೆ ಸಂಬಂಧಿಸಿದುವೂ ಸಮಾವೇಶವಾಗುತ್ತವೆ: ಕೃಷಿಕೇರಗಾನ, ಶ್ರಮಿಕೇರಗಾನ, ಇ.

(2) ಪ್ರೇಮಗೀತಿ : ಪ್ರೇಮಗೀತಗಳಲ್ಲಿ ಗಜಲುಗಳನ್ನೇ ಒಂದು ವಿಶಿಷ್ಟ ವರ್ಗವೆಂದು ಎಣಿಸಬಹುದು.

(3) ಪ್ರಕೃತಿಗೀತಿ : ಸೃಷ್ಟಿಯ ವಿಲಾಸಗಳನ್ನು ಕುರಿತ ಎಲ್ಲ ಹಾಡುಗಳು.

(4) ಅಧ್ಯಾತ್ಮಗೀತಿ : ಇವುಗಳಲ್ಲಿಯೂ ಬೇರೆ ಬೇರೆ ಪ್ರಕಾರಗಳನ್ನು ಕಲ್ಪಿಸಬಹುದು : ಎಲ್ಲ ಅಧ್ಯಾತ್ಮವಾದಿಗಳಿಗೆ ಇಷ್ಟವಾಗುವಂಥವು ; ವಿಶಿಷ್ಟವಾಗಿ ಶಾಕ್ತ (ವೈಷ್ಣವ), ಇಸಲಾಮಿ, ಪಂಥಗಳಿಗೆ ಹೊಂದಿದುವು ; ಸೂಫಿ, ವೇದಾಂತ ಮೊದಲಾದ ರಹಸ್ಯ ವಿದ್ಯೆಗಳ ಛಾಯೆಯುಳ್ಳವು ಇತ್ಯಾದಿ.

(5) ಕೌತುಕಗೀತಿ : ಲಘುವಾದ ಹಾಸ್ಯದ ಹಾಡುಗಳು, ಇವುಗಳಲ್ಲಿ ರಾಜಕೀಯ ಸಾಮಾಜಿಕ ವ್ಯಂಗ್ಯವಿರಬಹುದು ಇಲ್ಲವೆ ತಿಳಿಯಾದ ನಗೆಯಾಟವಿರಬಹುದು.

(6) ವಿವಿಧ ಗೀತಿ ; ಮೇಲೆ ಹೇಳಿದ ವಿಶಿಷ್ಟ ಪ್ರಕಾರಗಳಲ್ಲಿ ಸೇರದೆ ಇರುವಂತಹವು.

ನಜರುಲ್ ಹಾಡುಗಳದೇ ಆಗಲಿ, ಒಟ್ಟಿನಲ್ಲಿ ಬಾಂಗಲಾಗಾನದ್ದೇ ಆಗಲಿ ಸವಿಯನ್ನು ಅರಿಯುವದಕ್ಕೆ ಸೌಂದರ್ಯಮೀಮಾಂಸೆಯಲ್ಲಾಗಲಿ ಸಂಗೀತ ಶಾಸ್ತ್ರದಲ್ಲಾಗಲಿ ಘನವಾದ ಪಾಂಡಿತ್ಯವೇ ಬೇಕೆನ್ನುವಂತಿಲ್ಲ. ಅಂತಹ ಪಂಡಿತರು ತಮ್ಮ ದೃಷ್ಟಿಯಿಂದ ಹೇಳಬೇಕಾದುದನ್ನು ಹೇಳಲಿ, ಆದರೆ ಬಂಗಾಲದಲ್ಲಷ್ಟೇ ಏಕೆ ಭಾರತದೇಶದಲ್ಲಿಯೇ ಸಾಮಾನ್ಯರೆನಿಸಿದವರಲ್ಲಿ ಕೂಡಾ ಕಂಡು ಬರುವ ಗುಣಗ್ರಹಣ ಶಕ್ತಿ ಅಭಿರುಚಿಗಳು ಸಾಕಷ್ಟು ಉನ್ನತ ಮಟ್ಟದಲ್ಲಿವೆ. ನಜರುಲ್ ಹಾಡುಗಳ ಸವಿಯನ್ನು ಆಸ್ವಾದಿಸುವ, ಅವುಗಳ ವೈಶಿಷ್ಟ್ಯವನ್ನು ಗುರುತಿಸುವ, ಶಕ್ತಿ ಅವರಿಗಿದೆ.

ಬಂಗಾಲಿಯಲ್ಲಿ ಉತ್ತಮವಾದ ರಾಷ್ಟ್ರೀಯ ಗೀತಗಳಿವೆ. ಅವು ಅಭಿಜಾತ ಮತ್ತು ಜನಪ್ರಿಯ ಎರಡೂ ರೀತಿಗಳಲ್ಲಿವೆ. ರವೀಂದ್ರನಾಥ ಟಾಗೋರ, ದ್ವಿಜೇಂದ್ರಲಾಲ ರಾಯರಂತೆ ಇನ್ನೂ ಅನೇಕರ ಕೃತಿಗಳು ಈ ಗೀತಭಾಂಡಾರದ ಸಮೃದ್ಧಿಯನ್ನು ಹೆಚ್ಚಿಸಿವೆ. ಈ ಕ್ಷೇತ್ರದಲ್ಲಿ ನಜರುಲ್‌ನ ವಿಶಿಷ್ಟವಾದ ಕಾಣಿಕೆ ಎಂದರೆ ಸೈನಿಕರ ಹೆಜ್ಜೆಗೆ ಹೊಂದುವ ಹಾಡುಗಳು. ಸುಭಾಸಚಂದ್ರ ಬೋಸರೊಮ್ಮೆ ಹೇಳಿದಂತೆ ಈ ಹಾಡುಗಳನ್ನು ಹಾಡುತ್ತ ನಮ್ಮ ಸೇನೆಗಳು ಯಾವ ರಣಾಗ್ರದಲ್ಲಿಯೂ ನಡೆಯ ಬಹುದು. 'ದುರ್ಗಮಗಿರಿಕಾಂತಾರ', ಇಲ್ಲವೆ 'ಕಾರಾರ ಓಇ ಲೌಹಾ ಕಪಾಟ', ಇಲ್ಲವೆ 'ಏಇ ಸಿಕಲ ಪರಾಥಲ', ಇಲ್ಲವೆ 'ಅಮ್ರಾಛಾತ್ರದಲ' ಇಲ್ಲವೆ 'ಊರ್ಧ್ವ ಗಗನೇ ಬಾಜೇಮಾದಲ' ಇಂತಹ ಗೀತವೊಂದನ್ನು ನೆನೆದರೆ ಸನ್ 1920 ರಿಂದ 1947 ರ ವರೆಗೆ ನಮ್ಮ ರಾಷ್ಟ್ರವು ತುಳಿದ ದಾರಿ ಕಣ್ಣಮುಂದೆ ಕಟ್ಟುತ್ತದೆ. ನಜರುಲ್ ಇನ್ನೇನನ್ನೂ ಬರೆಯದಿದ್ದರೂ ಇವಷ್ಟೇ ಗೀತಗಳಿಂದಲೇ ಅವನ ಸ್ಥಾನ ರಾಷ್ಟ್ರೀಯ ಗೀತಗಳನ್ನು ಬರೆದವರ ಅಗ್ರಪಂಕ್ತಿಯಲ್ಲಿ ಭದ್ರವಾಗಿರುತ್ತಿತ್ತು. ಇದೇ ಜಾತಿಗೆ ಸೇರುವ ಇನ್ನಿತರ ಗೀತಗಳನ್ನೂ ಅವನು ಬರೆದಿದ್ದಾನೆ. ಅವುಗಳ ವ್ಯಂಗ್ಯ ಹರಿತ ವಾಗಿದೆ, ರಾಷ್ಟ್ರೀಯಭಾವನೆಯ ಗೀತಗಳಲ್ಲಿ ಅವುಗಳಿಗೂ ಉನ್ನತವಾದ ಸ್ಥಾನವಿದೆ; ಉದಾ—'ಡೊಮೀನಿಯನ್ ಸ್ಟೇಟಸ್', 'ಪ್ಯಾಕ್ಟ', 'ದೇ ಗೊರೂರ ಗಾ ಧುಯಿಯೇ' ಇತ್ಯಾದಿ. ಅಚ್ಚಾದ ಸಂಕಲನಗಳಲ್ಲಿ ಈ ಗೀತಗಳು ಕಾಣಿಸಿದಾಗ ಆ ಸಂಕಲನಗಳ ಪ್ರಕಟನೆಯನ್ನು ನಿಷೇಧಿಸಲಾಗುತ್ತಿತ್ತು. ಆದ್ದರಿಂದ ಬಾಯಿಂದ ಬಾಯಿಗೆ ಪ್ರಚಾರ ಹೊಂದುತ್ತ ಈ ಹಾಡುಗಳು ಬಂಗಾಲವನ್ನೆಲ್ಲ ವ್ಯಾಪಿಸಿದವು.

ಈ ಹಾಡುಗಳ ಜನಪ್ರಿಯತೆ ಬೆಳೆಯುತ್ತಿದ್ದಾಗಲೇ ಇಪ್ಪತ್ತರ ದಶಕದ ಮಧ್ಯ ದಲ್ಲಿ ನಜರುಲನ 'ಗಜಲ'ಗಳು ಬಂಗಾಲದ ಜನಮನವನ್ನು ಸೂರೆಗೊಂಡವು. ಅವು ಹೊಚ್ಚಹೊಸವಾಗಿದ್ದವು, ಅಪೂರ್ವವಾಗಿದ್ದವು. ಅವುಗಳಲ್ಲಿ ಲೇಖಕನ ಪ್ರತಿಭೆ ಎದ್ದುಕಾಣುತ್ತಿತ್ತಲ್ಲದೆ ಬಂಗಾಲೀ ಭಾಷೆಯು ಬಳಸಬಲ್ಲವನ ಕೈಯಲ್ಲಿ ಹೇಗೆ ಹೊಸ ದೊಂದು ಶಕ್ತಿಯನ್ನು ಪಡೆಯಬಹುದೆನ್ನುವದೂ ಕಾಣುತ್ತಿತ್ತು: 'ಆಮಾರೇಚೋಖ ಇಸಾರಾಯದಾಖ ದಿಯೇಜಾಯ ಕೋನಸೇದರದೀ' ಎನ್ನುವ, ಇಲ್ಲವೆ 'ಏತೋ ಜಲ ಓ ಕಾಜಲ ಚೋಖೇ' ಎನ್ನುವ, ಇಲ್ಲವೆ 'ಬಾಗಿ ಛಾಯ ಬುಲ್‌ಬುಲೀ ತೂಯಿ ಫುಲಸಖಾತೇ' ಇಲ್ಲವೆ 'ಕರುಣಕೇನೋ ಅರುಣ ಆಂಖೀ' ಎನ್ನುವ, ಇಲ್ಲವೆ 'ಕೇವು ಭೋಲೇ ನಾ ಕೇವು ಭೋಲೇ', ಮುಂತಾದ ಹಾಡುಗಳಲ್ಲಿಯ ಕಾವ್ಯಶಕ್ತಿ, ನಾಜೂಕು, ಮೋಹಕತೆಗಳು ಎಲ್ಲೆಲ್ಲಿಯೂ ಸ್ವಲ್ಪವೂ ತಡವರಿಸುವುದಿಲ್ಲ.

ಸನ್ 1932 ರಲ್ಲಿ ಪ್ರಕಟವಾದ 'ಝುಲ್‌ಫಿಕಾರ' ದಲ್ಲಿ ಹೊಸದೊಂದು ಧಾರ್ಮಿಕತೆಯ ಅಧ್ಯಾತ್ಮಿಕತೆಯ ದನಿ ಕೇಳಿಬರುತ್ತದೆ. ಇದರಲ್ಲಿಯ ಹಾಡುಗಳು 'ಇಸ್ಲಾಮ' ಮತಕ್ಕೆ ಸಂಬಂಧಿಸಿರುವದು ಸಹಜವಾಗಿತ್ತು. ಅವುಗಳ ಗಂಭೀರವಾದ ಸುತ್ತುನುಡಿಗಳಿಲ್ಲದ ಭಾಷೆಯೂ ಆಳವಾದ ಭಕ್ತಿಭಾವವೂ ಮನಮುಟ್ಟುವಂತಿವೆ. ಈ ಅಧ್ಯಾತ್ಮಿಕ ಧಾರ್ಮಿಕ ಭಾವನೆಯು ಇಸ್ಲಾಮಿ ಮತ್ತು ಹಿಂದವೀ ಎರಡೂ ರೀತಿ ಗಳಲ್ಲಿ ವ್ಯಕ್ತವಾಗುತ್ತಿತ್ತು. ಮೂವತ್ತರ ದಶಕದಲ್ಲಿಯ ನಜರುಲ್ ಕೃತಿಗಳಲ್ಲಿ ಈ

ಭಕ್ತಿಗೀತಗಳೂ ರಹಸ್ಯಗೀತಗಳೂ ಬಹಳ ಮುಖ್ಯವಾಗಿವೆ. ಇವುಗಳಲ್ಲಿಯ ನಾದ ಭಾವ ರಚನೆಗಳ ವೈವಿಧ್ಯ ಅಪ್ರತಿಮವಾಗಿದ್ದಿತು. ಇವುಗಳ ಜತೆಜತೆಯಲ್ಲಿಯೇ ನಜರುಲ್‌ನ ಜೀವನೋತ್ಸಾಹ, ಸ್ವಾತಂತ್ರ್ಯ ಪ್ರೀತಿ, ಹಾಸ್ಯಪ್ರವೃತ್ತಿಗಳು, ನಜರುಲ್ ಮನಸು ಮಂಕಾಗುವವರೆಗೂ, ಪುಟಿದು ಹೊರಬರುತ್ತಲೇ ಇದ್ದವು. 'ಚಂದ್ರಬಿಂದು' ಎಂಬ ಅವನ ಗೀತ ಸಂಕಲನ ಬಹುಕಾಲ ನಿಷೇಧಾಜ್ಞೆಗೆ ಒಳಗಾಗಿತ್ತು. ಅದರಲ್ಲಿಯ ವ್ಯಂಗ್ಯ ಅಪಹಾಸಗಳು ಅಂದಿನ ಬ್ರಿಟಿಷ ಆಳರಸರಿಗೆ ನುಂಗಲಾರದ ತುತ್ತಾಗಿದ್ದವು.

ರಸಾನುಭವಕ್ಕೆ ತಂತ್ರಜ್ಞಾನವು ಅಗತ್ಯವೆಂದಾದರೆ ನಜರುಲ್ ಗೀತಗಳ ಬೆಲೆಗಟ್ಟುವ ಕೆಲಸವನ್ನು ತಜ್ಞರಾದ ವಿಮರ್ಶಕರಿಗೂ ಸಂಗೀತಶಾಸ್ತ್ರ ಪ್ರವೀಣರಿಗೂ ಬಿಟ್ಟುಬಿಡೋಣ. ಸಂಗೀತಪ್ರಿಯರೂ ಜನಸಾಮಾನ್ಯರೂ ಆ ಗೀತಗಳನ್ನು ಮೆಚ್ಚಿಕೊಂಡಿರುವದನ್ನು ನೋಡಿದರೆ ಅವುಗಳ ಘನತೆಯ ಕಲ್ಪನೆಯಾಗಲಿಕ್ಕೆ ಸಾಕು. ಶಕ್ತನಾದ ಗಾಯಕನೊಬ್ಬನು ಹಾಡುವದನ್ನು ಕೇಳದೆ ಅವುಗಳ ಗುಣಾತಿಶಯವನ್ನು ಕೇವಲ ಶಬ್ದಗಳಿಂದ ಬಣ್ಣಿಸುವದು ಸಾಧ್ಯವಲ್ಲ. ಒಳ್ಳೆಯ ಕಲಾವಿದರು ಹಾಡಿದ ನಜರುಲ್ ಗೀತಗಳ ಗ್ರಾಮೋಫೋನ ರಿಕಾರ್ಡುಗಳನ್ನು ಲಭ್ಯವಾದಾಗಲೆಲ್ಲ ಕೇಳುತ್ತಿದ್ದರೆ ಅವುಗಳ ರಸಾಸ್ವಾದನೆಗೆ ಮಾಡಿದ ಯತ್ನ ವ್ಯರ್ಥವಾಗದೆಂದು ಓದುಗರಿಗೆ ಭರವಸೆ ಕೊಡಬಲ್ಲೆವು. ತಂತ್ರದಲ್ಲಿ ಕೂಡಾ ನಜರುಲ್ ಪ್ರಾವೀಣ್ಯ ಕಡಮೆಯದಲ್ಲ. ತಾನು ರಚಿಸಿದ ರಾಗಗಳಿಗೆ ಹೊಂದುವ ಶಬ್ದಗಳನ್ನು ಆಯ್ದುಕೊಳ್ಳುವದರಲ್ಲಿ ನಜರುಲ್‌ಗಿದ್ದ ಅಂತಃಪ್ರಜ್ಞೆ, ಸೌಂದರ್ಯಪ್ರೀತಿಗಳು ಒಮ್ಮೆಯೂ ಎಡವುತ್ತಿರಲಿಲ್ಲ. ಹಳೆಯುದನ್ನವನು ಕಣ್ಣುಮುಚ್ಚಿ ಹಿಂಬಾಲಿಸಲಿಲ್ಲ. ಅವನು ಯೋಜಿಸುತ್ತಿದ್ದ ಅಭಿಜಾತ ರಾಗಗಳ ಮತ್ತು ಜಾನಪದ ಧಾಟಿಗಳ ಸಂಯೋಗವು ಅಪೂರ್ವವಾಗಿ ಬೆರೆತು ಆಕರ್ಷಕವಾಗಿರುತ್ತಿತ್ತಲ್ಲದೇ ಇದು ಅವನದೇ ಎಂದು ಸಂಶಯವಿಲ್ಲದೆ ಗುರುತಿಸುವಂತಿರುತ್ತಿತ್ತು. ಉದಾಹರಣೆಗಳನ್ನು ಹೇಳಹೊರಟರೆ ಅವಕ್ಕೆ ಕೊನೆಯಿಲ್ಲವಾದೀತು. ಛಾಂದಸವೃತ್ತಿಯ ತಜ್ಞರು ಇಂತಹ ಪ್ರಯೋಗಗಳನ್ನು ಒಪ್ಪದೇ ಇರಬಹುದು ಆದರೆ ಅವನು 'ಬಿದ್ರೋಹಿ ಕವಿ.' ಅವನ ಬಿದ್ರೋಹವು ಜೀವನ ಕ್ಷೇತ್ರವನ್ನು ವ್ಯಾಪಿಸಿದಂತೆಯೆ ಸಂಗೀತ ಕ್ಷೇತ್ರಕ್ಕೂ ಹರಡಿದ್ದಿತು. ಅಂದು ಬಿದ್ರೋಹಿಯೆನಿಸಿದ್ದವನು ಇಂದು ಸನ್ಮಾನಿತ ಪ್ರತಿಭಾನ್ವಿತ ಕಲಾವಿದನೆನಿಸಿದ್ದಾನೆ.

ಎಂತಾದರೂ, ನಜರುಲ್ ಮೂಲದಲ್ಲಿ ಜನಕೋಟಿಯಿಂದ ಎದ್ದುಬಂದವನು. ಎಲ್ಲಾ ವಿಧದ ಜಾನಪದ ಸಂಗೀತದಲ್ಲಿ ಅವನಿಗಿದ್ದ ಆಸಕ್ತಿ ಸಹಜವಾಗಿತ್ತು. ಬಂಗಾಲಿ ಸಂಗೀತದ ವಿಶಿಷ್ಟಪ್ರಕಾರವಾದ 'ಕೀರ್ತನ,' (ಇದರಲ್ಲಿ ಅಭಿಜಾತ, ಜಾನಪದ ಎರಡೂ ಉಂಟು), ಪೂರ್ವ ಬಂಗಾಲದ ನದೀ ತೀರಗಳಲ್ಲಿ ಕೇಳಿಬರುವ 'ಭಾಟಿಯಾಲೀ,' ಪೂರ್ವ ಬಂಗಾಲದ ಇನ್ನೆರಡು ವಿಶಿಷ್ಟ ಪ್ರಕಾರಗಳಾದ 'ಜಾರೀ' ಮತ್ತು 'ಶಾರೀ,' ರಹಸ್ಯವಾದದ 'ಬಾವುಲ' ಗೀತಗಳು, ಉತ್ತರ ಬಂಗಾಲದ 'ಭಾಓಯಿಯಾ' ಎಂಬ ಪ್ರೇಮಗೀತಗಳು, ಸೂಫೀ ಪಂಥದ 'ಮುರ್ಶಿದಾ,' ಹಿಂದೂ ಭಕ್ತಿಪಂಥದ 'ರಾಮಪ್ರಸಾದೀ,' ಪಶ್ಚಿಮ ಬಂಗಾಲದ ಜಾನಪದ 'ಝುಮುರ,' ಇವೆಲ್ಲವುಗಳಲ್ಲಿಯೂ, ಇನ್ನೂ ಅನೇಕ ಜಾನಪದ ರೀತಿಗಳಲ್ಲಿಯೂ,

ಅಪಾರವಾದ ಹೊಸ ರಚನೆಗಳಿಗೆ ಅವಕಾಶವುಂಟೆಂದು ನಜರುಲ್ ಎಣಿಸಿದ್ದನು. ಉದಾಹರಣೆಗಳನ್ನು ಹೇಳಬೇಕೆಂದರೆ ಅವನ ಕೀರ್ತನೆ 'ಆಮಿ ಕೀ ಸುಖೇ ಗೋ ಗೃಹೇ ರಾಬೋ'; ಅವನ ಬಾವುಲ ಗೀತ 'ಆಮಿ ಖ್ಯಾಪಾ ಬಾವುಲ, ಆಮಾರ ದೇವುಲ ಆಮಾರೀ ಏಇ ಆಪನ ದೇಹ'; ಅವನ ಭಾಟಿಯಾಲಿ 'ಓರೇ ಮಾಝಿ ಭಾಯಿ, ತುಈ ಕೀ ದುಖಾ ಪೇಯೇ ಕುಲ ಹಾರಾಲೀ ಆಕುಲ ದೂನಿಯಾಯ,' ಇತ್ಯಾದಿ.

ಇಂತಹವೇ ಅಲ್ಲದೆ ಸುಂದರವಾದ ಕಾವ್ಯಮಯ ಹೆಸರುಗಳಿಂದ ಕರೆದ 'ನಿರ್ಝರಿಣೀ,' 'ಸಂಧ್ಯಾಮಾಲತೀ,' 'ಬನಕುಂತಲ,' 'ದೋಲನಚಂಪಾ' ಇತ್ಯಾದಿಯಾಗಿ ಅನೇಕ ಹೊಸ ಸ್ವರರಚನೆಗಳನ್ನೂ ಅವನು ಕಲ್ಪಿಸಿದನು.

ವ್ಯವಸ್ಥಿತವಾದ ದಾಖಲೆಗಳಿಲ್ಲದೆ, ಸಂಗ್ರಹಿಸಿ ಕಾದಿಡುವದಕ್ಕೆ ಸರಿಯಾದ ಪ್ರಯತ್ನಗಳಿಲ್ಲದೆ, ನಜರುಲ್ ಕೃತಿಗಳ ಸಮಗ್ರ ವಿಸ್ತಾರ ನಮಗಿಂದು ಸಿಲುಕದಂತಾಗಿದೆ. ಈಗ ಲಭ್ಯವಿರುವಷ್ಟರಿಂದಲೇ ನಿರ್ವಿವಾದವಾಗಿ ಹೇಳಬಹುದಾದದ್ದೇನೆಂದರೆ :

1. ವೀರಗೀತಗಳಲ್ಲಿ, ವಿಶೇಷವಾಗಿ ಸೈನಿಕ ಹೆಜ್ಜೆಗೆ ನುಡಿಯುವ ಗೀತಗಳಲ್ಲಿ, ನಜರುಲ್‌ನನ್ನು ಸರಿಗಟ್ಟಿದವರು ಯಾರೂ ಇಲ್ಲ.

2. ಹೊಸರೀತಿಗಳ ಅನ್ವೇಷಣೆಯಲ್ಲಿ ಅವನ ಪ್ರತಿಭೆ ಅಸಾಮಾನ್ಯವಾದದ್ದು. ಅವನ 'ಗಜಲ'ಗಳು ಬಾಂಗಲಾ ಗಾನಕ್ಕೆ ಹೊಸ ಸಮೃದ್ಧಿಯನ್ನು ತಂದಿವೆ.

3. ಧಾರ್ಮಿಕ ಮತ್ತು ಭಕ್ತಿಗೀತಗಳಲ್ಲಿ ಅವನ ಕೃತಿಗಳು ವಿಶಿಷ್ಟವಾಗಿದ್ದವು; ಇಸ್ಲಾಮಿ ಭಕ್ತಿಗೀತದೊಡನೆ ಶ್ಯಾಮಾಸಂಗೀತವನ್ನು ಸಮರಸಗೊಳಿಸುವದಕ್ಕೆ ಅವನು ಮಾಡಿದ ಯತ್ನಗಳು ಭಾರತೀಯ ಪರಂಪರೆಯ ವಿಶಿಷ್ಟ ಗುಣಗಳನ್ನು ಹೊಂದಿದ್ದವು.

4. ಕೊನೆಯದಾಗಿ, ರವೀಂದ್ರನಾಥ ಟಾಗೋರ, ಅತುಲಪ್ರಸಾದ ಸೇನ, ರಜನೀಕಾಂತ ಸೇನ ಇನ್ನೂ ಇಂತಹ ಅನೇಕರ ಜತೆಯಲ್ಲಿ ನಜರುಲ್ ಸಹ 'ಬಾಂಗಲಾ ಗಾನ'ದ ಪ್ರತಿಭಾನ್ವಿತ ಕಲಾವಿದರ ಶ್ರೇಣಿಯಲ್ಲಿ ನಿಲ್ಲುತ್ತಾನೆ. ಅವನು ಬಿಟ್ಟ ಬಳುವಳಿ ಇನ್ನಾರಿಗಿಂತಲೂ ಮೊತ್ತದಲ್ಲಿ ದೊಡ್ಡದಾಗಿದೆ.

ನಜರುಲ್ ಕೃತಿಗಳ ಜನಪ್ರಿಯತೆಗೆ ಸಹಾಯಕರಾದ ಗಣ್ಯ ಕಲಾವಿದರಲ್ಲಿ ಕುಮಾರ ಸಚಿನ್‌ದೇವಬರ್ಮನ್, ದಿಲೀಪಕುಮಾರರಾಯ, ಅಬ್ಬಾಸುದ್ದೀನ, ಕಮಲದಾಸಗುಪ್ತ, ಧೀರೇಂದ್ರಚಂದ್ರಮಿತ್ರ, ಸಂತೋಷ ಸೇನಗುಪ್ತ, ಸುಪ್ರಭಾ ಸರಕಾರ, ಫಿರೋಜಾಬೇಗಮ, ಮುಂತಾದವರನ್ನು ಹೆಸರಿಸಬಹುದು.

ಕವಿ ನಜರುಲ್‌ಗಿಂತ ಗೀತಕಾರ ನಜರುಲ್ ಯೋಗ್ಯತೆ ಹೆಚ್ಚಿನದೆಂಬುದರಲ್ಲಿ ತಥ್ಯವಿದೆ. ಕವಿತಾರಚನೆಯಲ್ಲಿ ಅವನು ಒಮ್ಮೊಮ್ಮೆ ತನ್ನ ಶಬ್ದಪ್ರವಾಹದಲ್ಲಿ ತಾನೇ ತೇಲಿಹೋಗುವದನ್ನು ಕಾಣಬಹುದು. ಅವನ ಗೀತಗಳಲ್ಲಿ ಹಾಗಲ್ಲ. ಆ ಮಾಧ್ಯಮ ಅವನಿಗೆ ಸಹಜವಾದದ್ದು. ಅವನ ಉತ್ತಮವಾದ ಸಾಧನೆ ಅದರಲ್ಲಿಯೇ ಇದೆ.

# 6. ' ಮುರಿದ ರೆಕ್ಕೆಗಳು '

ಸನ್ 1929 ರಲ್ಲಿ ನಜರುಲ್‌ನು ಕಲಾವಿದರ ಅಗ್ರಪಂಕ್ತಿಯಲ್ಲಿ ಸ್ಥಾನಪಡೆದಿದ್ದನು, ಸಂಗೀತದ ವ್ಯಾಪಾರಿಪ್ರಪಂಚದಲ್ಲಿ ಅವನ ಸ್ಥಾನ ಭದ್ರವಾಗಿತ್ತು, ಜೀವನವು ಸುಖಮಯವಾಗಿ ನಡೆದಿತ್ತು, ಅಭಾವದ ಭಯವು ಎಲ್ಲಿಯೂ ಕಾಣುವಂತಿರಲಿಲ್ಲ. ಆಗಲೇ ಇಬ್ಬರು ಗಂಡುಮಕ್ಕಳನ್ನು ಪಡೆದಿದ್ದ ಅವನು ಮೂರನೆಯವನಿಗಾಗಿ ಎದುರುನೋಡುತ್ತಿದ್ದನು. ನಜರುಲ್ ಅತ್ತೆ ಗಿರಿಬಾಲಾ ದೇವಿಯ ಕೃಪೆಯಿಂದಾಗಿ ನಜರುಲ್‌ಗಾಗಲಿ ಅವನ ಹೆಂಡತಿಗಾಗಲೀ ಮನೆಯ ವ್ಯವಹಾರಗಳ ಚಿಂತೆಯಿರಲಿಲ್ಲ. ತನ್ನ ವೃತ್ತಿಯಲ್ಲಿ ಅವನು ಸಾಧಿಸಿದ ಬೆಳವಣಿಗೆಯನ್ನು ವಿವರಿಸಿದ್ದಾಗಿದೆ. ಎಚ್ ಎಮ್ ವಿ ಗ್ರಾಮೊಫೋನ ಕಂಪನಿಯಂತೆಯೇ ಸೆನೋಲಾ ಮತ್ತು ಮೆಗಾಫೋನ ಎಂಬ ಸಂಸ್ಥೆಗಳೂ ಅವನ ಸಹಾಯವನ್ನು ಬಯಸಿಬಂದವು. ರೇಡಿಯೋ ಕಾರ್ಪೊರೇಶನ್ ಸಂಸ್ಥೆಯು ಅವನ ಗೀತಗಳಿಗೆ ಕೇಳಿದ ಬೆಲೆಯನ್ನೂ ಅವನಿಗೆ ಕೇಳಿದ ಸಂಬಳವನ್ನೂ ಕೊಡುವದಕ್ಕೆ ಸಿದ್ಧವಾಗಿತ್ತು. ಕಲಕತ್ತೆಯ ಮತ್ತು ಮುಂಬಯಿಯ ಚಲನಚಿತ್ರ ನಿರ್ಮಾಪಕರಿಂದಲೂ ಆಗಾಗ ಕರೆಗಳು ಬರುತ್ತಿದ್ದವು. (ಫಜಲೀ ಬ್ರದರ್ಸ ಎಂಬವರು ತಮ್ಮ ಚೌರಂಘೀ ಎಂಬ ಚಿತ್ರಕ್ಕೆ ಅವನಿಂದ ಗೀತಗಳನ್ನು ಕೊಂಡವರು ಪೂರ್ತಿಯಾಗಿ ಅವನಿಗೆ ಸಲ್ಲಬೇಕಾಗಿದ್ದ ಹಣವನ್ನು ಸಂದಾಯ ಮಾಡಲೇ ಇಲ್ಲ). ಅವನು ನಾಟಕಗಳನ್ನೂ ಬರೆಯುತ್ತಿದ್ದನು ಮತ್ತು ಅವುಗಳಲ್ಲಿಯ ಹಾಡುಗಳು ಅವನವೇ ಇರುವದು ಸಹಜವಾಗಿತ್ತು. ಸನ್ 1931 ರಲ್ಲಿ ಇಂತಹ ಒಂದು ನಾಟಕದಲ್ಲಿ ಅವನು ರಂಗಭೂಮಿಯ ಮೇಲೆ ಕಾಣಿಸಿಕೊಂಡದ್ದೂ ಇದ್ದಿತಂತೆ. 'ಧ್ರುವ' ಎಂಬ ಒಂದು ಚಲನಚಿತ್ರದಲ್ಲಿ ಅವನು ಪಾತ್ರವಹಿಸಿದ್ದು ತಿಳಿದಿದೆ. ಆದರೆ ಒಟ್ಟಿನಲ್ಲಿ ಅವನು ನಾಟ್ಯಕಲೆಗೆ ಒಗ್ಗಿದಂತಿರಲಿಲ್ಲ. ಅದರಲ್ಲೂ ಪ್ರಿಯರಾದವರ ವಿಯೋಗದಿಂದಲೂ ಮಾನಸಿಕ ಅಸ್ವಸ್ಥತೆಯಿಂದಲೂ ಅವನ ಸ್ವಾಭಾವಿಕವಾದ ಉಲ್ಲಾಸವು ಕುಗ್ಗುತ್ತಿರುವಾಗ ಇದು ಸಾಧ್ಯವಿರಲಿಲ್ಲ.

ಅವನು ಅನುಭವಿಸಿದ ಮೊದಲನೆಯ ಆಘಾತವೆಂದರೆ ಅವನ ಹಿರಿಯ ಮಗು ಬುಲ್‌ಬುಲ್‌ನ ಮರಣ (1930). ಈ ಮಗುವಿನ ಹೆಸರನ್ನೇ ಅವನು ತನ್ನ ಮೊದಲನೆಯ ಗೀತ ಸಂಕಲನಕ್ಕೂ ಇಟ್ಟಿದ್ದನು (1928). ಬುಲ್‌ಬುಲ್ ಎಂಬ ಶಬ್ದವು ಅವನಿಗೆ ಪ್ರಿಯವಾಗಿದ್ದದ್ದು ಆ ಮಗುವಿನ ಹೆಸರಾಗಿ ಇನ್ನೂ ಅಕ್ಕರೆಯದಾಯಿತು. ಆ ಮಗು ಬಹು ಚೂಟಿಯಾಗಿತ್ತೆಂದೂ ಎಲ್ಲರಿಗೂ ಅಚ್ಚುಮೆಚ್ಚಾಗಿತ್ತೆಂದೂ ಬಲ್ಲವರೆಲ್ಲರೂ ಹೇಳುತ್ತಾರೆ. ಮುಝುಫ್ಫರ ಅಹಮ್ಮದನಂತಹ ಅವನ ಮಿತ್ರರು ಇಂದಿಗೂ ಅನೇಕ

ದಶಕಗಳ ತರುವಾಯುವೂ ಆ ಮಗುವನ್ನು ನೆನೆದರೆ ಕಣ್ಣೀರು ತೆಗೆಯುತ್ತಾರೆ. ಮಗು ಮೈಲೀಬೇನೆಗೆ ತುತ್ತಾಗಿ ಬಹು ಬೇಗ ತೀರಿಕೊಂಡಿತು. ಅದು ಕಾಯಿಲೆಯಲ್ಲಿದ್ದಾಗ ನಜರುಲ್ ಅದರ ಪಕ್ಕದಲ್ಲಿಯೇ ಕೈಹಿಡಿದುಕೊಂಡು ಕದಲದೆ ಕುಳಿತಿದ್ದನು. ಕುಟುಂಬದವರೆಲ್ಲರಿಗೂ ಅತಿಶಯವಾದ ದುಃಖವಾಗುವದು ಸಹಜವಾಗಿದ್ದರೂ, ಕವಿಯಾಗಿದ್ದ ತಂದೆಯ ಮನಸಿಗಾದ ನೋವು ಎಲ್ಲರದನ್ನೂ ಮೀರಿಸಿತ್ತೆಂಬುದು ಮುಂದೆ ನಡೆದ ಘಟನೆಗಳಿಂದ ಕಂಡಿತು. ಅಥವಾ ತೀಕ್ಷ್ಣವಾದ ಸಂವೇದನೆಗಳಿಗೂ ಪ್ರಬಲವಾದ ಭಾವಾವೇಶಗಳಿಗೂ ಒಳಗಾಗುತ್ತಿದ್ದ ನಜರುಲ್‌ನಿಗೆ ಅಂತಹ ಆಘಾತವನ್ನು ತಡೆಯುವದಕ್ಕೆ ಶಕ್ತಿ ಸಾಲದೆ ಹೋಗಿರಬಹುದು. ಅದರಿಂದ ಅವನು ಪೂರ್ಣವಾಗಿ ಚೇತರಿಸಿಕೊಳ್ಳಲಿಲ್ಲ ಎಂದೇ ಹೇಳಬಹುದು. ಅಂದಿನವರೆಗೆ ನಜರುಲ್, ಮನೋವಿಜ್ಞಾನಿಗಳ ಭಾಷೆಯಲ್ಲಿ ಹೇಳುವಂತೆ, 'ಬಹಿರ್ಮುಖಿ'ಯಾದ ವ್ಯಕ್ತಿಯಾಗಿದ್ದನು. ಅವನ ಚೈತನ್ಯ, ಉತ್ಸಾಹ, ಉಲ್ಲಾಸ ಮತ್ತು ಗೆಳೆತನಗಳಿಂದಾಗಿ ಎಲ್ಲರಿಗೂ ಬೇಕಾದವನಾಗಿದ್ದನು. ಆ ಉಲ್ಲಸಿತ ಮನಸಿಗೆ ಬಲವಾದ ಪೆಟ್ಟು ತಾಗಿತು. ಮೇಲ್ನೋಟಕ್ಕೆ, ಅವನು ಎಂದಿನಂತೆಯೇ ತನ್ನ ಕೆಲಸಗಳನ್ನು ನಿರ್ವಹಿಸುತ್ತಿದ್ದಂತೆ ಕಾಣುತ್ತಿತ್ತು. ಕೆಲವೇ ದಿನ ದುಃಖದಿಂದ ಮಂಕಾಗಿದ್ದು ಆ ಮೇಲೆ ಸುಧಾರಿಸಿಕೊಂಡು ತನ್ನ ಗೀತರಚನೆಯ ಕೆಲಸವನ್ನು ಮುಂದರಿಸಿದನು. ಒಂದುದಿನ ಕವಿ ಜಾಸಿಮುದ್ದೀನ ಕಂಡಂತೆ, ಆಗ ಅಚ್ಚಿನಲ್ಲಿದ್ದ ನಜರುಲ್ ಗೀತ ಸಂಕಲನ 'ಚಂದ್ರಬಿಂದು'ವಿನ ಕರಡುಗಳನ್ನು ತಿದ್ದುವಂತಹ ಕಷ್ಟಕರವಾದ ಕೆಲಸವನ್ನೂ ಅವನು ನಿರ್ವಹಿಸಲು ಯತ್ನಿಸುತ್ತಿದ್ದನು.

ಆದರೆ ದಿನಗಳೆದಂತೆ ಅವನ ಸ್ವಭಾವದಲ್ಲಿ ಮೊದಲಿಲ್ಲದ ಗಾಂಭೀರ್ಯವೂ, ಆಳವೂ, ಎಷ್ಟೋ ಸಲ ವಿಷಾದವೂ ಕಾಣಬರಹತ್ತಿದವು. ತನ್ನನ್ನು ಉದ್ಯೋಗದಲ್ಲಿರಿಸಿಕೊಂಡವರಿಗಾಗಿ ಅವನು ತನ್ನ ಕೌಶಲವನ್ನು ನಾನಾ ರೀತಿಗಳಲ್ಲಿ ತೋರಿಸುತ್ತಲೇ ಇದ್ದನು. ಆದರೆ ಈಗ ಬರುತ್ತಿದ್ದ ಅವನ ಭಕ್ತಿಗೀತಗಳು ಬರಿಯ ಕುಶಲ ಕೃತಿಗಳಾಗಿರಲಿಲ್ಲ. ಉದಾಹರಣೆಗಳೆಂದು ಅವನ ಭಜನ 'ಚಲೊ ಮನ ಅನಂತ ಧಾಮ,' ಕೀರ್ತನ 'ಆಮಿ ಕೀ ಸುಖೇ ಗೋ ಗೃಹೇ ರಾಜೋ,' ಮತ್ತೂ ಅನೇಕ ಬಾವುಲ ಗೀತಗಳು, ಶ್ಯಾಮಾಸಂಗೀತ, ಇಸ್ಲಾಮಿಯಾ ಗೀತಗಳನ್ನು ಹೇಳಬಹುದು. ಈ ಗೀತಗಳ ವಸ್ತುಗಳಲ್ಲಿ ಬೇರೆ ಬೇರೆ ಪಂಥಗಳ ಕಟ್ಟುನಿಟ್ಟಾದ ದೃಷ್ಟಿಯಿಂದ ನೋಡಿದರೆ ಎಷ್ಟೋ ಅಸಂಗತಿಗಳು ಕಾಣಬಹುದು. ಏಕೆಂದರೆ ಇಸ್ಲಾಮಿನಲ್ಲಿ ಏಕೇಶ್ವರವಾದಕ್ಕೂ ಮೂರ್ತಿಪೂಜಾ ವಿರೋಧಕ್ಕೂ ಅಪವಾದಗಳು ಇರಲೇ ಆರವು; ಆದರೆ ನಜರುಲ್‌ನ ಹಿಂದೂ ಗೀತಗಳಲ್ಲಿ ಕಾಲಿಯನ್ನು ಮಾತೆಯಾಗಿ ಕಂಡದ್ದಿದೆ, ವೇದಾಂತದ ಅನಾದಿ ಪ್ರಕೃತಿಯಾಗಿ ಕಂಡದ್ದಿದೆ. ಕೃಷ್ಣನ ಪ್ರೇಮವನ್ನು ಪ್ರಣಯಿಯೆಂದೂ, ಸಖನೆಂದೂ, ಮಗನೆಂದೂ ಕಂಡದ್ದೂ ಇದೆ.

ಹೀಗೆ ಯಾವ ಪಂಥಕ್ಕೂ ಕಟ್ಟುಬೀಳದಿರುವದು ನಜರುಲ್‌ಗೆ ಸಹಜವಾಗಿತ್ತು. ಅವನ ಹಿಂದೂ ಕೃತಿಗಳು ಸುಮಾರಾಗಿ ಪರಂಪರೆಯ ಜಾಡಿನಲ್ಲೇ ನಡೆಯುತ್ತಿದ್ದರೂ ಅವನಿಗಿದ್ದ ಮುಸ್ಲಿಮ ಪರಂಪರೆಯ ಬಳಕೆ ವಿಸ್ಮಯಗೊಳಿಸುವಂತಿದೆ. ಮುಸ್ಲಿಮ

ಪರಂಪರೆಯನ್ನು ಕಟ್ಟುನಿಟ್ಟಾಗಿ ಅನುಸರಿಸುವವರು ಸಂಗೀತದ ಸನಿಯದಲ್ಲಿಯೂ ಸುಳಿಯುವದಿಲ್ಲ. ಆದರೆ ಉದಾರಭಾವನೆಯುಳ್ಳ ಆ ಪರಂಪರೆಯವರೊಡನೆ ನಜರುಲ್‌ಗಿದ್ದ ಏಕತಾನತೆ ಆಶ್ಚರ್ಯಕರವಾಗಿದೆ.

'ದಿಕೇ ದಿಕೇ ಪುನಹಾ ಜ್ವಲಿಯಾ ಉಠೀಛೆ ದೀನ ಇಸ್ಲಾಮಿ ಲಾಲ ಮಶಾಲ'

(ದಿಕ್ಕುದಿಕ್ಕಿನಲ್ಲಿ ಮತ್ತೆ ಬೆಳಗುತಿದೆ ದೀನ ಇಸಲಾಮಿನ ದೀವಟಿಗೆ)

ಹೀಗೆ ಆ ಪರಂಪರೆಯವರ ಆಶೆ ಆಕಾಂಕ್ಷೆಗಳನ್ನು ಎತ್ತಿ ನುಡಿಯುವ ಅನೇಕ ಹಾಡುಗಳು ಅವನ 'ಝುಲ್‌ಫಿಕಾರ' ಎಂಬ ಗೀತ ಸಂಕಲನದಲ್ಲಿವೆ (1932).

ಇಲ್ಲಿ ಹೇಳಲಾದ 'ದೀವಟಿಗೆ' ಮತಾಂಧತೆಯುದಲ್ಲ, ವಿಶ್ವವ್ಯಾಪಿಯಾಗಬೇಕೆಂಬ ಆಕ್ರಮಣ ಬುದ್ಧಿಯದಲ್ಲ. ಆ ಗೀತದಲ್ಲಿಯೇ ಹೇಳಿದಂತೆ ತನ್ನನ್ನು ತಾನು ತಿಳಿದು ಕೊಂಡು ತೊಳಗಿ ಬೆಳಗಿ ಬೆಳೆಯುವ ಹೊಸಕಾಲದ ರೂಪವನ್ನುಳ್ಳದ್ದು. ಆದರ ಪ್ರವರ್ತನ ಕಮಾಲ ಪಾಶಾ, ಝುಗಲುಲ್ ಪಾಶಾ, ರೆಝಾಶಾಹ ಪಹಲವೀ ಮುಂತಾದವರಿಂದ ಆಗುವದೆಂದು ನಜರುಲ್ ನಂಬಿದ್ದನು. ಇಂತಹ ಅನೇಕ ಉದಾತ್ತ ವಾದ ಹಾಡುಗಳಲ್ಲಿ ಇಸಲಾಮು ಪಂಥದ ದೃಷ್ಟಿಯಿಂದ ಆಕ್ಷೇಪಣೀಯವಾದದ್ದು ಏನೂ ಇಲ್ಲವೆಂಬದು ಮಾತ್ರವಲ್ಲ ಅವುಗಳ ಅಧ್ಯಾತ್ಮಿಕ ನಿಲುವು ಭಾವುಕತೆಗಳು ಎಲ್ಲರಿಗೂ ಒಪ್ಪಿಗೆಯಾಗುವಂತಿವೆ.

ಇದರ ಮುಂದಿನ ಹಂತದಲ್ಲಿ ಅಂದರೆ ಬುಲ್‌ಬುಲ್ ಮರಣದ ತರುವಾಯದಲ್ಲಿ ನಜರುಲ್ ರಚಿಸಿದ ಗೀತಗಳಲ್ಲಿ ಕಾಲೀಮಾತಾ ಇಲ್ಲವೆ ಸಹಜೀಯ ಪಂಥದ 'ದೇಹತತ್ವ' ಇಲ್ಲವೆ ಇಂತಹವೇ ಇನ್ನಾವಾದರೂ ರಹಸ್ಯವಾದಗಳ ಕಲ್ಪನೆಗಳು ಮುಖ್ಯವಾಗಿರುತ್ತಿದ್ದವು. ಇದಲ್ಲದೆ ನಿತ್ಯಜೀವನದಲ್ಲಿಯೂ ಸಹ ನಜರುಲ್ ಗುರು ಮುಖದಿಂದ ತಿಳಿಯಬಹುದಾದ ರಹಸ್ಯವಾದಕ್ಕಿಂತ ತೀರಾ ಬೇರೆಯಾದ, ತಿಳಿವಿಗೆ ಮೀರಿದ, ವಾಮಾಚಾರಗಳತ್ತ ಒಲಿಯುತ್ತಿದ್ದುದು ಕಂಡಿತು. ಹಿಂದೂ ಮುಸ್ಲಿಮ ಎರಡೂ ಮುಖ್ಯವಾದ ಪರಂಪರೆಗಳಲ್ಲಿ ಇಂತಹ ನಂಬಿಕೆಗಳಿಗೆ ಸ್ಥಾನವಿಲ್ಲ. ಆದರೆ ಇಂತಹ ನಿಗೂಢ ಆಸಕ್ತಿಗಳ ಹಂತದಲ್ಲಿಯೇ ಕೆಲವು ದಿನಗಳ ತರುವಾಯ ನಜರುಲ್ ತನ್ನ ಇಸ್ಲಾಮ ಪರಂಪರೆಗೆ ಮರಳಿಬಂದದ್ದೂ ಕಾಣುತ್ತದೆ. ಪಾಪ ಪ್ರಾಯಶ್ಚಿತ್ತಗಳ ವಿಚಾರಗಳೂ ಅಲ್ಲಲ್ಲಿ ಕಾಣುತ್ತವೆ. ಇಸ್ಲಾಮ ಮತಕ್ಕೆ ವ್ಯತಿರಿಕ್ತವಾದ ವಿಚಾರ ಗಳಿಗೆ ತನ್ನ ಮನಸಿನಲ್ಲಿ ಎಡೆಗೊಟ್ಟದ್ದಕ್ಕೆ ನಜರುಲ್ ಪಶ್ಚಾತ್ತಾಪ ಪಟ್ಟನೆನ್ನುವದು ತೀರಾ ಸಂಕುಚಿತ ಭಾವನೆಯ ಹೇಳಿಕೆಯಾದೀತು. ಹಿಂದೂ ಮತದ ಶ್ಯಾಮಾ ಸಂಗೀತ ಭಕ್ತಿಮಾರ್ಗವೂ ಇಸಲಾಮ ಮತದ ಭಕ್ತಿಮಾರ್ಗವೂ ನಜರುಲ್ ಹೃದಯ ದಲ್ಲಿ ಸರಿಸಮನಾಗಿ ಕೊನೆಯವರೆಗೂ ಪ್ರಭಾವಿಯಾಗಿದ್ದವೆನ್ನುವುದು ಅವೆರಡೂ ಮತಗಳ ಅಧ್ಯಾತ್ಮಿಕ ನೆಲೆಗಳಲ್ಲಿ ಅಂತತಃ ವಿಸಂಗತಿ ಇಲ್ಲವೆನ್ನುವದಕ್ಕೆ ಸಾಕ್ಷಿಯಾಗಿದೆ. ನಜರುಲ್ ತನ್ನ ನಿತ್ಯಜೀವನದಲ್ಲಿಯೂ ಆತ್ಮದ ಅಂತರಾಳದಲ್ಲಿಯೂ ಕಾಲೀಭಕ್ತ ನಾಗಿದ್ದಷ್ಟೇ 'ಒಬ್ಬನೇ ಅಲ್ಲಾ ಇನ್ನೊಬ್ಬನಿಲ್ಲ' ಎಂದೂ ದೃಢವಾಗಿ ನಂಬಿದ್ದನು. ಸತ್ಯವೆಂಬದು ಒಂದು, ದೇವತಾ ಕಲ್ಪನೆಗಳು ಬೇರೆ ಬೇರೆ ದಾರಿಗಳಾದರೂ ಗಮ್ಯ

ವೊಂದೇ, ಯಾವವೇ ಗುಣಗಳಿಂದ ನಿರ್ದೇಶಿತವಾಗುವ ಸಗುಣರೂಪಗಳೂ, ಯಾವ ಗುಣಗಳಿಂದಲೂ ನಿರ್ದೇಶಿಸಲಾಗದ ನಿರ್ಗುಣ ರೂಪವೂ, ಆ ಒಂದೇ ದೇವತತ್ವದ ಆರಾಧನೆಗೆ ಸಾಧನಗಳೆಂದೂ, ಅವನು ಆಳವಾಗಿ ನಂಬಿದ್ದನು.

ಈ ಹಂತದ ಕೊನೆಯ ದಿನಗಳಲ್ಲಿ ಅವನು ರಚಿಸಿದ ಕೃತಿಗಳಲ್ಲಿ ಮುಂದೆ ಬರಲಿದ್ದ ಅವನ ಮನೋವಿಕೃತಿಯ ಸೂಚನೆಗಳು ಕಂಡು ಬರುತ್ತವೆ. ಅವನ ಕಲ್ಪಕಶಕ್ತಿಯ ಮೇಲೆ ಅವನಿಗಿದ್ದ ಹತೋಟಿ ತಪ್ಪುತ್ತಿರುವದು ಕಂಡಿತು. ಅವನ ಶರೀರವನ್ನು ಆಕ್ರಮಿಸುತ್ತಿದ್ದ ನಿಶ್ಶಕ್ತಿಯು ಅವನ ಬುದ್ಧಿಯನ್ನೂ ಕವಿಯುತ್ತಿದ್ದಂತೆ ಕಂಡಿತು. ಸನ್ 1936 ರಿಂದ 1942 ವರೆಗೆ ಅವನು ರಚಿಸಿದ ಕೃತಿಗಳನ್ನು ತಿಳಿಯಬೇಕಾದರೆ ಅವನು ಜೀವನದಲ್ಲಿ ಅನುಭವಿಸಿದ ದಾರುಣವಾದ ಘಟನೆಗಳನ್ನೂ ಗಮನಿಸಬೇಕು.

ನಜರುಲ್‌ನಲ್ಲಿ ನಾಸ್ತಿಕವೆಂದು ಕಾಣುವ ವಿಚಾರಗಳನ್ನು ಬುಲ್‌ಬುಲನ ಮರಣವು ಅಳಿಸಿಹಾಕಿತು. ನಾಸ್ತಿಕತೆ ಅವನ ಮನಸಿನಲ್ಲಿ ಎಂದೂ ಆಳವಾಗಿ ಬೇರೂರಿರ ಲಿಲ್ಲವೆಂದೇ ಹೇಳಬೇಕು. ಅವನ ಅಂತಃಕರಣದಿಂದ ಮೂಡಿಬಂದ ಯಾವ ಕೃತಿಗಳಲ್ಲೂ ಅವನಲ್ಲಿ ದೈವೀಶ್ರದ್ಧೆಯಿಲ್ಲದಿರುವದು ಕಾಣುವದಿಲ್ಲ. ಸುಮಾರು 1920-21 ರಿಂದ ಅವನು ಸ್ಪಷ್ಟವಾಗಿಯೂ ಪ್ರಾಮಾಣಿಕವಾಗಿಯೂ ತನಗೆ ಯಾವ ಮತಾಚಾರ ದಲ್ಲಿಯೂ ಶ್ರದ್ಧೆಯಿಲ್ಲವೆಂದು ಹೇಳುತ್ತಿದ್ದನು. ತನ್ನ ಯಾವ ಪ್ರತಿಭಟನೆಯನ್ನೇ ಆದರೂ ಸ್ವಲ್ಪ ಹೆಚ್ಚಾಗಿಯೇ ಒತ್ತಿ ಹೇಳುವದು ಅವನ ಸ್ವಭಾವವೇ ಆಗಿದ್ದರಿಂದ ತಾನು ಕಮ್ಯುನಿಸ್ಟನೆಂದೂ ನಾಸ್ತಿಕನೆಂದೂ ಒಲವಾಗಿ ಹೇಳಿಕೊಂಡದ್ದಿರಬಹುದು. ಧರ್ಮದ ವಿರುದ್ಧವಾಗಿ ಅವನು ಪ್ರತಿಭಟಿಸಿದ್ದು ಪ್ರಪಂಚದಲ್ಲಿ ಎದ್ದು ಕಾಣುವ ಅನ್ಯಾಯಗಳಿಗಾಗಿ ; ದೇವರ ಹೆಸರಿನಲ್ಲಿಯೂ ಜಾತಿಮತಗಳ ಹೆಸರಿನಲ್ಲಿಯೂ ಕೆಲವೇ ಜನರು ಉಳಿದವರನ್ನು ಶೋಷಿಸುತ್ತಿದ್ದುದಕ್ಕಾಗಿ. ಇವುಗಳಿಂದಾಗಿ ಅವನಿಗೆ ಈ ಪ್ರಪಂಚವನ್ನು ಯಾವ ದೈವೀಶಕ್ತಿಯೂ ನಿರ್ಮಿಸಿರಲಾರದೆಂದು ತೋರಿತು. ಮಾನವನ ಭವಿತವ್ಯವನ್ನು ರೂಪಿಸುವಂತಹ ಯಾವ ದೇವರೂ ಇಲ್ಲ, ಅದನ್ನು ಮಾನವರೇ ರೂಪಿಸಿಕೊಳ್ಳಬೇಕು ಎಂದು ಅವನಿಗೆ ಅನ್ನಿಸಿತು. ಶೆಲ್ಲಿಯ ನಾಸ್ತಿಕತೆ ಗಿದ್ದಂತೆ ನಜರುಲ್‌ನ ನಾಸ್ತಿಕತೆಗೂ ಸಾಮಾನ್ಯವಾಗಿ ಕಂಡುಬರುವ ಮತಪಂಥಗಳ ಆಚಾರ ವಿಚಾರಗಳನ್ನು ಮೀರಿದ ಒಂದು ಶ್ರದ್ಧೆಯು ಆಧಾರವಾಗಿತ್ತು. ಆದರೆ ಮಾರ್ಕ್ಸ್ ವಿಚಾರಧಾರೆಯ ಒರೆಗೆ ಹಚ್ಚಿದರೆ ನಜರುಲ್ ನಾಸ್ತಿಕತೆಯು ಗಿಲೀಟು ನಿಲ್ಲುವಂತಿರಲಿಲ್ಲ. ಇದು ಬೇರೆಯವರಿಗೆ ತಿಳಿದಿದ್ದಷ್ಟೇ ಅವನಿಗೂ ತಿಳಿದಿತ್ತು.

ಸಾಧಾರಣವಾಗಿ ಭಾರತದಲ್ಲಿ ಹುಟ್ಟಿದ ಪ್ರತಿಯೊಂದು ಮಗುವೂ ದೇವತಾ ಶ್ರದ್ಧೆಯನ್ನೂ ಅಲೌಕಿಕ ಶಕ್ತಿಗಳಲ್ಲಿ ವಿಶ್ವಾಸವನ್ನೂ ತನ್ನ ತಾಯಿಯ ಹಾಲಿ ನೊಡನೆಯೇ ಅರಗಿಸಿಕೊಂಡಿರುತ್ತದೆ. ಈ ನಿಯಮಕ್ಕೆ ನಜರುಲ್ ಅಪವಾದವಾಗಿರ ಲಿಲ್ಲ. ಅವನು ಇಸ್ಲಾಮ ಧರ್ಮದ ದೀಕ್ಷೆಯನ್ನೂ ಮಕತಾಬಿನಲ್ಲಿ ಶಿಕ್ಷಣವನ್ನೂ ಪಡೆದಿದ್ದನು. ಇವಲ್ಲದೆ ಅವನು ಚಿಕ್ಕಂದಿನಿಂದಲೇ ತಾಂತ್ರಿಕ ಪಂಥದ ಆಚಾರ ವಿಚಾರಗಳಲ್ಲಿಯೂ, ಹಟಯೋಗ ಮುಂತಾದ ಸಾಧನೆಗಳಲ್ಲಿಯೂ, ಫಕೀರರ ಮತ್ತು ಇತರ ದೈವೀಪುರುಷರ ಪವಾಡಗಳಲ್ಲಿಯೂ ನಂಬಿಗೆಯುಳ್ಳವನಾಗಿದ್ದನು. ಅವನು

ಬೆಳೆದ ಪರಿಸರಗಳನ್ನು ಗಮನಿಸಿದರೆ ಅವನಿಗೆ ಯಾವದೇ ಮತಾಚಾರದಲ್ಲಿ ಅಂಧ ಶ್ರದ್ಧೆಯಿರುವದು ಸಾಧ್ಯವಿರಲಿಲ್ಲ. ಆದರೆ ಯಾವ ಧರ್ಮದಲ್ಲಿಯೇ ಆದರೂ ಆಚಾರ್ಯ ಪುರುಷರ ಮಾರ್ಗದರ್ಶನದಂತೆ ವಿಹಿತವಾದ ಶ್ರದ್ಧೆ ಸಾಧನೆಗಳನ್ನು ಅನುಸರಿಸಿ ಅಲೌಕಿಕ ಶಕ್ತಿಗಳನ್ನು ಪಡೆಯಬಹುದೆಂದು ಅವನು ನಂಬಿದ್ದನು.

ಹೀಗೆ ಬಾಲ್ಯದಲ್ಲಿ ಪರಂಪರೆಯಿಂದ ಬಳುವಳಿಯಾಗಿ ಬಂದ ಸಂಬುಗೆಗಳು ಮುಂದೆ ಅನುಸರಿಸಿದ ಹೊಸ ಆಚಾರ ವಿಚಾರಗಳಿಂದ ಮಸುಕಾದರೂ ಪೂರ್ತಿಯಾಗಿ ಅಳಿಸಿ ಹೋಗುವದಿಲ್ಲ ಮತ್ತು ಆ ವ್ಯಕ್ತಿಯ ಜೀವಮಾನವೆಲ್ಲವೂ ನಿರ್ಣಾಯಕವಾದ ಘಟ್ಟಗಳಲ್ಲಿ ಅವನಿಗೆ ತಿಳಿದೋ ತಿಳಿಯದೆಯೋ ತಮ್ಮ ಪ್ರಭಾವವನ್ನು ಬೀರುತ್ತವೆ ಎನ್ನುವದು ಇಂದಿನ ಮನೋವಿಜ್ಞಾನಿಗಳಿಗೂ ಒಪ್ಪಿಗೆಯಾಗಿದೆ. ಆದರೆ ವ್ಯಕ್ತಿಯು ಜೀವನದಲ್ಲಿ ಮುಂದೆ ಸಾಗಿದಂತೆ ಅವನ ಬುದ್ಧಿಯು ಬೆಳವಣಿಗೆ ಅನುಭವಗಳು ವೈಜ್ಞಾನಿಕ ಶಿಕ್ಷಣ ಮೊದಲಾದವು ಈ ಬಳುವಳಿಯಾಗಿ ಬಂದ ಶ್ರದ್ಧೆಗಳಲ್ಲಿ ಕೆಲಮಟ್ಟಿಗೆ ಮಾರ್ಪಾಡುಗಳನ್ನು ಮಾಡಬಹುದು. ನಜರುಲ್ ಪ್ರಾಯಕ್ಕೆ ಬಂದಾಗ ಅವನ ಅನುಭವವೂ ಇದೇ ಆಗಿರಲಿಕ್ಕೆ ಸಾಕು. ತನ್ನ ಸ್ವಂತದ ಬುದ್ಧಿ ಅನುಭವಗಳಿಂದ ಅವನು ಕಂಡುಕೊಂಡ ಮಾನವತಾವಾದ ಮತ್ತು ಸ್ವಾತಂತ್ರ್ಯ ಪ್ರೀತಿಗಳಿಂದಾಗಿ ಅವನಲ್ಲಿ ಹಳೆಯ ಕಂದಾಚಾರಗಳ ಕುರಿತು ಅಶ್ರದ್ಧೆ ಕಂಡಿರಬಹುದು. ಅವನಲ್ಲಾದ ಈ ಜಾಗೃತಿಗೆ ಸೋವಿಯತ ದೇಶದ ಕ್ರಾಂತಿಯೂ ಬಹುಮಟ್ಟಿಗೆ ಕಾರಣವಾಗಿತ್ತು. ಒಬ್ಬ ವ್ಯಕ್ತಿಯು ಅಂತರ್ಮುಖಿಯಾಗಿದ್ದರೆ ಹೀಗೆ ಆಸ್ತಿಕತೆಯಿಂದ ನಾಸ್ತಿಕತೆಗೂ ಅಚಲವಾದ ಶ್ರದ್ಧೆಯಿಂದ ಅಪಾರವಾದ ಸಂದೇಹಕ್ಕೂ ತನ್ನ ನಿಲುವನ್ನು ಬದಲಿಸುವದು ಕಷ್ಟಕರವಾದ ಅನುಭವವಾಗಬಹುದು.

ನಜರುಲ್ ವ್ಯಕ್ತಿತ್ವ ಹೆಚ್ಚಾಗಿ ಬಹಿರ್ಮುಖಿಯಾಗಿದ್ದ ಕಾರಣ ಅವನು ಇಂತಹ ಸಂಕಟದಲ್ಲಿ ಸಿಲುಕಲಿಲ್ಲ. ಆದರೆ ಈ ದ್ವಂದ್ವವನ್ನು ಕೆಲಮಟ್ಟಿಗಾದರೂ ಅವನು ಎದುರಿಸಬೇಕಾದದ್ದು ಅನಿವಾರ್ಯವಾಗಿತ್ತು. ಆದಕಾರಣವೇ ಅವನು ಅಂದಿನ ಮತಾಚಾರಗಳಲ್ಲಿಯ ಗ್ರಾಮ್ಯವಾದ ದೇವತಾ ಭಕ್ತಿಯನ್ನು ಅಲ್ಲಗಳೆದರೂ ತನ್ನ ಕಾವ್ಯಗಳಲ್ಲಿಯೂ, ತನ್ನ ಅಂತಃಕರಣವನ್ನು ಬಿಚ್ಚಿಟ್ಟು ಬರೆದ 'ರಾಜಬಂದೀರ ಜಬಾನಬಂದೀ' ಅಂತಹ ಬರಹಗಳಲ್ಲಿಯೂ, ಸರ್ವಸಮರ್ಥವಾದ ದೈವೀಶಕ್ತಿಯ ಅಸ್ತಿತ್ವವನ್ನು ಒಪ್ಪಿರುವದು ಕಾಣುತ್ತದೆ. ಪ್ರಬುದ್ಧ ಜೀವನದಲ್ಲಿ ಅವನ ಗಮನವನ್ನು ಸೆಳೆದ ಕೇವಲ ಭೌತವಾದವಾಗಲೀ, ತನ್ನಂತೆ ಪರರ ಬಗೆದರಾಯಿತೆನ್ನುವ ನಾಸ್ತಿಕವಾದವಾಗಲೀ, ಪ್ರತ್ಯಕ್ಷವೇ ಪ್ರಮಾಣವೆನ್ನುವ ಮಾನವತಾವಾದ, ಗುಣ ಪರಿವರ್ತನ ವಾದಗಳಾಗಲಿ, ಅವನ ಭಾವುಕ ಸ್ವಭಾವಕ್ಕೆ ಒಗ್ಗುವಂತಿರಲಿಲ್ಲ. ಸನ್ 1921 ರಿಂದ 1930 ವರೆಗಿನ ಕಾಲದಲ್ಲಿ ನಜರುಲ್ ಬಹಿರಂಗವಾಗಿ ಏನೇ ಪ್ರತಿಪಾದಿಸುತ್ತಿದ್ದರೂ ಅವನ ಅಂತರಂಗದಲ್ಲಿಯ ಶ್ರದ್ಧೆ ಅಳಿಸಿಹೋಗಿರಲಿಲ್ಲ. ಇದೇ ಕಾಲದಲ್ಲಿ ಅವನು ಶ್ರೀ ಅರವಿಂದಮಹರ್ಷಿಗಳ ಬಂಧುವಾದ ಬರೀಂದ್ರಕುಮಾರ ಘೋಷ, ಮತ್ತು ತನ್ನ ಪ್ರಕಾಶನ ಕಾರ್ಯವನ್ನು ಮೊದಲಿಗೆ ಕೈಕೊಂಡ 'ಆರ್ಯ ಪಬ್ಲಿಷಿಂಗ್ ಹೌಸ' ಅವರೊಡನೆ ಸಲುಗೆಯನ್ನು ಬೆಳಸಿದ್ದು ಕೇವಲ ಆಕಸ್ಮಿಕವೆಂದಾಗಲಿ ರಾಜ

ಕಾರಣಕ್ಕೆ ಸಂಬಂಧಿಸಿದ್ದೆಂದಾಗಲಿ ಹೇಳಲಾಗುವುದಿಲ್ಲ. ಇವರೆಲ್ಲರೂ ಶ್ರೀ ಅರವಿಂದರ ತಾಂತ್ರಿಕಯೋಗದಲ್ಲಿ ಆಸಕ್ತಿಯುಳ್ಳವರಾಗಿದ್ದು ಬಹಿರಂಗವಾಗಿಯೇ ಇಂದ್ರಿಯಾತೀತವಾದ ನಿಗೂಢವಾದ ತತ್ವಗಳ ಪ್ರಚಾರದಲ್ಲಿ ತೊಡಗಿದ್ದರು. ಈ ಪರಿಚಯದಿಂದಾಗಿ ತಂತ್ರ ವಿದ್ಯೆಯಲ್ಲಿಯೂ, ಕಾಲೀಭಕ್ತಿ ಪಂಥದಲ್ಲಿಯೂ, ಯೋಗಿ, ಸಿದ್ಧ, ಫಕೀರರ, ಪವಾಡಶಕ್ತಿಯಲ್ಲಿಯೂ ನಜರುಲ್‌ನ ವಿಶ್ವಾಸ ಬೆಳೆಯುತ್ತಿತ್ತೆಂಬುದು ಬಹುಶಃ ಅವನ ಈ ಮಿತ್ರರಿಗೆ ತಿಳಿಯದೆ ಇದ್ದಿರಲಾರದು.

ಸನ್ 1930 ರಲ್ಲಿ ಬುಲ್‌ಬುಲ್ ಮರಣಹೊಂದಿದಾಗ ನಜರುಲ್ ಜೀವನ-ಮರಣಗಳ, ಜೀವ-ಪುನರ್ಜನ್ಮಗಳ, ತನ್ನ ಸ್ವಂತ ಆತ್ಮದ, ಗೂಢವಾದ ಸವಾಲುಗಳನ್ನು ಎದುರಿಸಬೇಕಾಯಿತು. ತಾಂತ್ರಿಕ ಆಚಾರಗಳಿಂದ ಜೀವದಿಂದಿದ್ದವರ ಮತ್ತು ಮೃತಾತ್ಮರ, ತನ್ನ ಮತ್ತು ಬುಲ್‌ಬುಲ್, ನಡುವೆ ಸಂಪರ್ಕವನ್ನೇರ್ಪಡಿಸುವುದು ಸಾಧ್ಯವೆಂಬ ಅವನ ಹಳೆಯ ಶ್ರದ್ಧೆ ಅವನನ್ನು ಸೆಳೆಯಿತು. ಇಂತಹ ಸಂದರ್ಭದಲ್ಲಿ ಅವನೊಬ್ಬ ಅಂತರ್ಮುಖಿ ವ್ಯಕ್ತಿಯಾಗಿದ್ದರೆ ಮಧ್ಯಯುಗದ ಕಬೀರ, ದಾದು, ಮೊದಲಾದ ಸಂತರು ಸೂಫಿಗಳು ತೋರಿದ ದಾರಿಯಲ್ಲಿ ಅಧ್ಯಾತ್ಮಿಕ ಚಿಂತನೆಯಲ್ಲಿಯೂ ರಹಸ್ಯ ಮಾರ್ಗದ ಶೋಧನೆಯಲ್ಲಿಯೂ ತೊಡಗಬಹುದಿತ್ತು. ಆದರೆ ನಜರುಲ್ ವ್ಯಕ್ತಿತ್ವ ಬಹಿರ್ಮುಖವಾದದ್ದು. ಅವನ ಭಾವಾವೇಶಗಳು ಪ್ರಬಲವಾಗಿರುತ್ತಿದ್ದವು. ತಂತ್ರವಿದ್ಯೆಯಲ್ಲಿ ಅವನಿಗೆ ಶ್ರದ್ಧೆಯಿದ್ದಿತು. ಆದ್ದರಿಂದ ಅವನಿಗೆ ಬೇಕಾಗಿದ್ದದ್ದು ಪವಾಡಗಳು, ಮರಣೋತ್ತರ ಜೀವನದ ಪ್ರತ್ಯಕ್ಷ ಪುರಾವೆಗಳು. ಆದ್ದರಿಂದ ಅವನು ತಂತ್ರ ಹಠಯೋಗಗಳಂತಹ ಕಷ್ಟವಾದ ಮಾರ್ಗಗಳತ್ತ ಆಕರ್ಷಿತನಾದನು. ಆಧ್ಯಾತ್ಮಿಕ ಚಿಂತನೆಗಿಂತ ವಾಮಾಚಾರಗಳಲ್ಲಿ ಅವನ ಆಸಕ್ತಿ ಹೆಚ್ಚಾಯಿತು. ಮೃತಾತ್ಮರೊಡನೆ ಮಾತಾಡುವುದಕ್ಕೆ ಅವಕಾಶವನ್ನು ಕಲ್ಪಿಸುವೆನೆನ್ನುವ ಸಿದ್ಧ ಫಕೀರರನ್ನು ಅವನು ಹುಡುಕ ತೊಡಗಿದನು. ಬುಲ್‌ಬುಲ್‌ನನ್ನು ಕಂಡು ಮೈದಡವಿ ಅವನೊಡನೆ ಮಾತಾಡಬೇಕೆಂಬ ತರ್ಕವಿರುದ್ಧವಾದ ಹುಚ್ಚು ಆಸಕ್ತಿ ಅವನಲ್ಲಿ ಬೆಳೆಯುತ್ತ ನಡೆಯಿತು! ಬರೀಂದ್ರಕುಮಾರ ಘೋಷರೋ, ನಲಿನೀಕಾಂತ ಸರಕಾರರೋ ನಜರುಲ್‌ನನ್ನು ಅಂದು ಲಾಲಗೋಲಾ ಹೈಸ್ಕೂಲಿನ ಮುಖ್ಯಾಧ್ಯಾಪಕರಾಗಿದ್ದ ಬರದಾಚರಣ ಮಜೂಮದಾರರ ಹತ್ತಿರ ಪರಿಚಯ ಮಾಡಿಸಿದರೆಂದು ತೋರುತ್ತದೆ. ಈ ಬರದಾಚರಣರು ಶ್ರೀ ಅರವಿಂದರಷ್ಟೇ ಅಲೌಕಿಕ ಸಿದ್ಧಿಗಳನ್ನು ಪಡೆದವರೆಂದು ಅವನಿಗೆ ಹೇಳಿದ್ದರು. ಬರದಾಚರಣರ ಮಾರ್ಗದರ್ಶನದಂತೆ ನಜರುಲ್ ಯೋಗಸಾಧನೆಗಳನ್ನು ಮಾಡಿದರೆ ಬರದಾಚರಣರು ಅವನಿಗೆ ಬುಲ್‌ಬುಲ್ ಭೇಟಿಯನ್ನು ಮಾಡಿಸಬಲ್ಲರೆಂದೂ ಹೇಳಿದರು. ಇದನ್ನು ಕೇಳಿ ನಜರುಲ್ ಕೂಡಲೇ ಲಾಲಗೋಲಾಕ್ಕೆ ಹೋಗಿ ಮಜೂಮದಾರರಿಂದ ದೀಕ್ಷೆಯನ್ನೂ ಮಾರ್ಗದರ್ಶನವನ್ನೂ ಪಡೆದನು. ಕೆಲವು ಕಾಲ ಅವನು ಕಾವೀ ಬಣ್ಣದ ಬಟ್ಟೆಗಳನ್ನೂ ಧರಿಸುತ್ತಿದ್ದನು. ಅವನ ಸಾಧನೆ ಎಲ್ಲಿಯ ವರೆಗೆ ತಲುಪಿತು ಅವನ ಕಂಡದ್ದೇನು ಎನ್ನುವುದು ಸಾಧಾರಣ ಮನುಷ್ಯರ ತಿಳುವಳಿಕೆಗೆ ಮೀರಿದ್ದು! ಇಲ್ಲಿ ಗಮನಿಸಬೇಕಾದದ್ದೆಂದರೆ ಇಂತಹ ಸ್ಥಿತಿಯಲ್ಲಿಯೂ ಅನೇಕ ವರ್ಷಗಳ

ವರೆಗೆ ನಜರುಲ್ ಪ್ರತಿಭೆಯು ಉತ್ತಮವಾದ ಕೃತಿಗಳನ್ನು ರಚಿಸಲು ಸಮರ್ಥವಾಗಿತ್ತು.

ಆಮೇಲೆ ನಿಧಾನವಾಗಿ ಅವನ ಶರೀರವನ್ನು ರೋಗವು ವ್ಯಾಪಿಸತೊಡಗಿತು. ಪ್ರಾರಂಭದಲ್ಲಿ ಅದನ್ನು ಯಾರೂ ಗಮನಿಸಲಿಲ್ಲ. ಔಷಧೋಪಚಾರಗಳನ್ನೂ ಮಾಡಲಿಲ್ಲ. ಅವನು ಮಾಡುತ್ತಿದ್ದ ನಿಗೂಢ ಸಾಧನೆಗಳೂ ಅದಕ್ಕೆ ಕಾರಣವಾಗಿರಬಹುದೆಂದು ಭಾವಿಸಿದರು. ಮಾನಸಿಕ ಅಸ್ವಸ್ಥತೆಯು ಚಿಹ್ನಗಳು ಸ್ಪಷ್ಟವಾಗಿ ಗೋಚರಿಸುವ ವರೆಗೂ ವೈದ್ಯಕೀಯ ಸಹಾಯವನ್ನು ಒದಗಿಸಲೇ ಇಲ್ಲ. ತನ್ನ ದೈನಂದಿನ ಕಾರ್ಯಗಳನ್ನು ನಿರ್ವಹಿಸುವದು ನಜರುಲ್‌ನಿಗೆ ಅಸಾಧ್ಯವಾಯಿತು.

ಇದಕ್ಕಿಂತಲೂ ಹೆಚ್ಚಿನ ಆಘಾತವೊಂದು ನಜರುಲ್‌ನ ಅದೃಷ್ಟದಲ್ಲಿ ಕಾದಿತ್ತು. ಇದು ಸನ್ 1939 ರಲ್ಲಿ ಎರಗಿತು. ಅವನ ಹೆಂಡತಿ ಪ್ರಮಿಲಾದೇವಿ ಕಾಯಿಲೆಬಿದ್ದಳು. ಅವಳು ಹಾಸಿಗೆ ಹಿಡಿದ ಕೆಲವೇ ದಿನಗಳಲ್ಲಿ ಅವಳ ದೇಹದ ಕೆಳಗಿನ ಅರ್ಧವೆಲ್ಲವೂ ನಿಷ್ಕ್ರಿಯವಾದದ್ದು ಕಂಡಿತು. ಅವಳ ಪ್ರಜ್ಞಾ ಶಕ್ತಿ ಕುಂದಿರಲಿಲ್ಲ. ತನ್ನ ಆ ಅವಸ್ಥೆಯಲ್ಲಿಯೇ ಸಾಧ್ಯವಾದಷ್ಟು ಮನೆಯ ವ್ಯವಹಾರಗಳನ್ನು ಅವಳು ನೋಡಬಲ್ಲವಳಾಗಿದ್ದಳು. ತನ್ನ ಮೊದಲಿನ ದುಃಖ ವ್ಯಥೆಗಳಿಂದ ಹಣ್ಣಾಗಿದ್ದ ನಜರುಲ್‌ಗೆ ಮಾತ್ರ ಇದು ಸಹಿಸಲಸಾಧ್ಯವಾದ ಆಘಾತವಾಯಿತು. ಅವನ ಮನಸಿನ ರೋಗ ಉಲ್ಬಣಿಸಿತು. ಗಂಡ ಹೆಂಡಿರಿಬ್ಬರಿಗೂ ಔಷಧ ಆರೈಕೆಗಳ ಅವಶ್ಯಕತೆಯುಂಟಾಯಿತು. ಅದಕ್ಕಾಗಿ ಹೆಚ್ಚೆಚ್ಚಾಗಿ ಹಣವೂ ಖರ್ಚಾಗತೊಡಗಿತು.

ಅಂತೂ ನಜರುಲ್ ಎದುರಿಸಬೇಕಾದ ಅನೇಕ ಅನಿಷ್ಟಗಳೊಡನೆ ಹಣದ ಅಭಾವವೂ ಸೇರಿಕೊಂಡಿತು. ಅವನ ಅಸ್ವಸ್ಥತೆಯು ಅವನ ಕೆಲಸಕ್ಕೆ ತೊಂದರೆಯನ್ನುಂಟುಮಾಡುವ ಮೊದಲು ಅನೇಕ ವರ್ಷಗಳ ಕಾಲ ಅವನ ಸಂಪಾದನೆಯು ಅಂದಿನ ಕಲಾವಿದರ ಮಾನದಿಂದ ಚನ್ನಾಗಿಯೇ ಇದ್ದಿತು. ಆದರೆ ಮುಂದಾಲೋಚನೆ ಅವನ ಸ್ವಭಾವದಲ್ಲಿಯೇ ಇರಲಿಲ್ಲ. ಅವನ ಔದಾರ್ಯವೊಂದು ದೋಷವೆನಿಸುವಷ್ಟಿದ್ದಿತು. ಮಿತ್ರರ ಸಹವಾಸದಲ್ಲಿ ಅವನು ಸಂತೋಷಕೂಟಗಳಲ್ಲಿ ತೊಡಗಿದರೆ ಅವನಿಗೆ ವೆಚ್ಚದ ಪರಿವೆ ಇರುತ್ತಿರಲಿಲ್ಲ. ಬುಲ್‌ಬುಲ್ ಮರಣದಿಂದ ತನಗಾದ ದುಃಖವನ್ನು ಮರೆಯುವದಕ್ಕೆ ಅವನ ಈ ಅಭ್ಯಾಸವು ಹೆಚ್ಚಾಗುತ್ತ ನಡೆಯಿತು. ಹೆಚ್ಚು ಅನುಭವಸ್ಥಳಾಗಿ ಮನೆಯ ನಿರ್ವಾಹವನ್ನು ವಹಿಸಿಕೊಂಡ ಅವನ ಅತ್ತೆ ಗಿರಿಬಾಲಾದೇವಿಯು ಅವನ ಈ ಚಟವನ್ನು ತಡೆಯಲು ಶಕ್ತಿಯಿಲ್ಲದವಳಾದಳು. ಅವನ ಹೆಂಡತಿಯಂತೂ ಏನೂ ಮಾಡಲಾರದವಳಾಗಿದ್ದಳು. ನಜರುಲ್ ತಾನಾಗಿಯೇ ಎಚ್ಚರ ವಹಿಸುವದು ಅಸಂಭವವಾಗಿತ್ತು, ಏಕೆಂದರೆ ತನ್ನ ಕಾರ್ಯಶಕ್ತಿಯೂ, ಗಳಿಕೆಯೂ, ಸುಖಜೀವನವೂ, ಒಂದು ದಿನ ಹಿಮ್ಮೆಟ್ಟಬಹುದೆಂದು ತಿಳಿಯುವದಕ್ಕೆ ಅವನು ಸಿದ್ಧನಿರಲಿಲ್ಲ.

ಕೊನೆಗೆ ಕಷ್ಟದ ದಿನಗಳು ಬಂದಾಗ ಅವನು ಸಾಲಿಸಿಟರ ಅಸೀಮಕೃಷ್ಣ ದತ್ತ ಎಂಬವರಿಗೆ ಬರೇ ನಾಲ್ಕು ಸಾವಿರ ರೂಪಾಯಿಗಳಿಗೆ 1937 ರಿಂದ ತನ್ನ ಎಲ್ಲ ಸಾಹಿತ್ಯ ಕೃತಿಗಳಿಂದಲೂ 1939 ರಲ್ಲಿ ತನ್ನ ಎಚ್. ಎಮ್. ವಿ. ರಿಕಾರ್ಡುಗಳಿಂದಲೂ

ಬರುತ್ತಿದ್ದ ರಾಯಲ್ಟಿ ಹಣಗಳನ್ನು ಅಡವು ಮಾಡಬೇಕಾಯಿತು. ಇಂತಹ ಅಪಾರ ವಾದ ಕಲೆಯ ಭಾಂಡಾರಕ್ಕೆ ಬರಿಯ ನಾಲ್ಕು ಸಾವಿರ ರೂಪಾಯಿಗಳೆಂದರೆ ಅವನ ಸ್ಥಿತಿ ಎಷ್ಟು ದಾರುಣವಾಗಿದ್ದಿತೆಂಬುದನ್ನು ಊಹಿಸಬಹುದು. ನಜರುಲ್ ಹಿಂದೆಯೂ ಮಾಡಿದ ಅನೇಕ ಇಂತಹ ವ್ಯವಹಾರಗಳಂತೆಯೇ ಇದರಿಂದಲೂ ಅವನು ಬಿಡುಗಡೆ ಯನ್ನು ಪಡೆಯಲೇ ಇಲ್ಲ. ಅಡವು ಇಟ್ಟುಕೊಂಡ ವಕೀಲರು ಕಲಕತ್ತೆಯ ರಾಜಕೀಯ ಸಾಮಾಜಿಕ ವರ್ಗಗಳಲ್ಲಿ ಪ್ರತಿಷ್ಠಿತರು. ಅವರು ನಜರುಲ್‌ಗೆ ಆಗಲೇ ಕೊಟ್ಟ ಹಣ ಆಗಲೇ ಖರ್ಚಾಯಿತು; ಅದರಿಂದ ಅವನು ತನ್ನ ಚಿಕ್ಕಪುಟ್ಟ ಸಾಲಗಳನ್ನು ಹರಿದನು. ಮನೆಯ ವೆಚ್ಚಕ್ಕೆ ವಿಶೇಷವಾಗಿ ವೈದ್ಯಕೀಯ ವೆಚ್ಚ ಗಳನ್ನು ತೂಗಿಸುವದಕ್ಕೆ ಅದು ಸಾಲದೆ ಬಂತು. ನಜರುಲ್‌ನ ಕಾರ್ಯಶಕ್ತಿ ಕುಗ್ಗುತ್ತ ನಡೆದಂತೆ ಅವನ ಹೆಂಡತಿಯ ಆರೈಕೆಗೆ ತರಬೇತಾದ ದಾಯಿಯರ ಅವಶ್ಯಕತೆ ಯುಂಟಾಯಿತು. ಬೆಲೆಗಳು ಒಂದೇಸವನೆ ಏರುತ್ತಿದ್ದವು. ಅವಶ್ಯಕ ವಸ್ತುಗಳ ಅಭಾವವುಂಟಾಯಿತು. ಎರಡನೆಯ ಮಹಾಯುದ್ಧ ಇಷ್ಟರಲ್ಲಿ ಆರಂಭವಾಗಿತ್ತು.

ರೆಕ್ಕೆ ಮುರಿದ ಹಕ್ಕಿ ಎಷ್ಟು ಹಾರೀತು! ತೀರಾ ಅಗತ್ಯಬಿದ್ದಾಗ ಅಂದಿಗೆ ಸಾಲುವಷ್ಟು ಗಳಿಸುವ ಯತ್ನಗಳನ್ನು ಆಗಾಗ ಮಾಡುತ್ತಿದ್ದನು. ಆದರೆ ನಿಯಮಿತ ವಾಗಿ ಆದಾಯ ಬರುವಂತಹ ನೌಕರಿಯಾಗಲಿ ಕೆಲಸವಾಗಲಿ ಅವನಿಗೆ ಇಲ್ಲ ದಂತಾಯಿತು. ಹಣದ ಅವಶ್ಯಕತೆಯಂತೂ ಹೆಚ್ಚಾಗುತ್ತಲೇ ಇತ್ತು. ತನ್ನಲ್ಲಿ ಇದ್ದ ಬಿದ್ದ ಬಲವನ್ನೆಲ್ಲ ಕೂಡಿಸಿಕೊಂಡು ಇನ್ನೊಂದು ಯತ್ನ ಮಾಡುವೆನೆಂದು ಉದ್ಯುಕ್ತ ನಾದನು. ಆಗ ಮುಸ್ಲಿಮ ಲೀಗ ಮತ್ತು ಕಾಂಗ್ರೆಸುಗಳ ನಡುವೆ ತಿಕ್ಕಾಟ ಹೆಚ್ಚಾಗು ತ್ತಿದ್ದಿತು. ಎ. ಕೆ. ಫಜುಲುಲ್ ಹಕ್ ಅವರು ಮತ್ತೆ ಕೆಲವು ಕಾಲ ಬೆಂಬಲಿಸಿದ ಒಂದು ದಿನಪತ್ರಿಕೆಯಲ್ಲಿ ನಜರುಲ್‌ನು "ಎರಡು ರಾಷ್ಟ್ರ" ವಾದವನ್ನು ವಿರೋಧಿಸಿ ಬರೆಯುವುದನ್ನು ಒಪ್ಪಿಕೊಂಡನು. ಅವನ ಬರವಣಿಗೆಯಲ್ಲಿ ಅವನಿಗೆ ಸಹಜವಾಗಿದ್ದ ಧ್ಯೇಯವಾದ, ಭಾವಾವೇಶಗಳು, ಹೇರಳವಾಗಿರುತ್ತಿದ್ದರೂ ಅದರ ಗುಣಮಟ್ಟ ಯಾವಾಗಲೂ ಒಂದೇ ಎತ್ತರಕ್ಕೆ ನಿಲ್ಲುತ್ತಿರಲಿಲ್ಲ; ಮತ್ತು ಆ ಕಾಲದ ಅವಶ್ಯಕತೆಗೆ ತಕ್ಕಂತೆ ಅದರ ವಾದಕ್ಕೆ ಮೊನೆಯಿರುತ್ತಿರಲಿಲ್ಲ. ಈ ಕಾಲದಲ್ಲಿಯ ಅವನ ಕೆಲವು ಕೃತಿಗಳು: 'ಶಕ್ತಿಸ್ತುತಿ' ಇಲ್ಲವೆ ರವೀಂದ್ರನಾಥರ ಮರಣ ಸಂದರ್ಭದಲ್ಲಿ ಬರೆದದ್ದು, ನಿಜವಾಗಿಯೂ ಉನ್ನತಮಟ್ಟದುವಾಗಿದ್ದವು. ರಾಷ್ಟ್ರದ ಸ್ವಾತಂತ್ರ್ಯದ ಬಗ್ಗೆ ಮಾನವತೆಯ ಬಗ್ಗೆ ಅವನಿಗಿದ್ದ ಆಳವಾದ ಆಸಕ್ತಿಗಳು ಅವನ ಎಲ್ಲ ಬರವಣಿಗೆ ಗಳಲ್ಲಿಯೂ ಎದ್ದು ಕಾಣುವಂತಿವೆ. ಇವುಗಳಲ್ಲಿ ಬಹಳಷ್ಟನ್ನು 1945 ರಲ್ಲಿ "ನತೂನ ಚಾಂದ" (ನೂತನ ಚಂದ್ರ) ಎಂಬ ಸಂಕಲನದಲ್ಲಿ ಒಟ್ಟಿಗೆ ಪ್ರಕಟಿಸಲಾಯಿತು.

ಆದರೆ ಒಟ್ಟಿನಲ್ಲಿ ಅವನ ಸ್ಥಿತಿ ಆಶಾದಾಯಕವಾಗಿರಲಿಲ್ಲ. ಕಷ್ಟಕಾಲದಲ್ಲಿ ಅವನೊಡನೆ ಸಹಾನುಭೂತಿಯಿಂದಲೂ ಅಂತಃಕರಣದಿಂದಲೂ ಇದ್ದ ಗೆಳೆಯರೂ ಕೆಲವರಿದ್ದರು. ಅವರಲ್ಲಿ ದಿ. ಕಾಲೀಪಾದ ಗುಹರಾಯ ಎಂಬುವರು ಮುಂದೆ ವಾರಾಣಸಿಯಲ್ಲಿ ವಾಸವಾಗಿದ್ದು ಭಾರತದ ಮಹಾಯೋಗಿಗಳಲ್ಲಿ ಒಬ್ಬರೆಂದು ಖ್ಯಾತಿ ಪಡೆದರು. ದಿ. ಅಮಲೇಂದು ದಾಸಗುಪ್ತರು ಸರಸ ವಿಚಾರಶೀಲ ಲೇಖಕ

ರೆಂದು ಹೆಸರುವಾಸಿಯಾದರು. ದಿ. ನೃಪೇಂದ್ರಕೃಷ್ಣ ಗುಪ್ತರು ಒಳ್ಳೆಯ ನಿಬಂಧಕಾರರಾಗಿದ್ದರು. ಝುಲ್‌ಫಿಕರ ಅಹಮ್ಮದರು ಮುಂದೆ ಬಂಗಲಾದೇಶ ವಾಸಿಗಳಾಗಿ ಸೂಫಿ ಝುಲ್‌ಫಿಕರ ಅಹಮ್ಮದ ಎಂದು ಹೆಸರಾಗಿದ್ದಾರೆ. ಇವರಲ್ಲದೆ ಇನ್ನೂ ಕೆಲವು ಜನ ಹಿಂದುಗಳೂ ಮುಸ್ಲಿಮರೂ ಅವನ ಮಿತ್ರರಾಗಿದ್ದು ಸಹಾಯ ಮಾಡುತ್ತಿದ್ದರು. ಅವನ ಕುಟುಂಬನಿರ್ವಹಣೆಯ ಭಾರವನ್ನು ಕಡಮೆಮಾಡು ವುದಕ್ಕೂ ಅವನ ಚಿಂತೆಯಲ್ಲಿ ಸಹಭಾಗಿಗಳಾಗಿರುವದಕ್ಕೂ ಈ ಎಲ್ಲಾ ಮಿತ್ರರು ಕೈಲಾದ ಎಲ್ಲ ಯತ್ನಗಳನ್ನು ಮಾಡುತ್ತಿದ್ದರು. ಆದರೆ ಅವರೆಲ್ಲರೂ ಆಧ್ಯಾತ್ಮಿಕ ಪ್ರವೃತ್ತಿಯುವರಾಗಿದ್ದರು. ತಮ್ಮ ತಮ್ಮ ಮತ ಪಂಥಗಳಂತೆ ಅಜ್ಞಾತ ಅಲೌಕಿಕ ಶಕ್ತಿ ಗಳನ್ನೇ ಹೆಚ್ಚಾಗಿ ನಂಬಿಕೊಂಡಿದ್ದು ವೈಜ್ಞಾನಿಕ ವೈದ್ಯಕೀಯ ವಿಚಾರಗಳಿಗೆ ಗಮನ ಕೊಡುತ್ತಿರಲಿಲ್ಲ. ಅಸ್ಪಷ್ಟವಾದ ಯೋಗ ಸಾಧನೆಗಳಿಂದ ಯಾವ ಫಲವೂ ಕಾಣದೇ ಇದ್ದರೂ ನಜರುಲ್ ಅವುಗಳಲ್ಲಿಯೇ ಹೆಚ್ಚೆಚ್ಚು ಆಸಕ್ತನಾಗಿ ಎದೆಗುಂದದೆ ಇದ್ದನು.

ಮುಂದೆ ಒದಗಲಿದ್ದ ಅನಿಷ್ಟದ ಸೂಚನೆಗಳು ಆಗಾಗ ಕಾಣುತ್ತಲೇ ಇದ್ದವು. ಸನ್ 1941 ರಲ್ಲಿ ನಜರುಲ್ ಬೋಂಗಾಂವ ಎಂಬಲ್ಲಿ ಒಂದು ಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷನಾಗಿದ್ದನು. ಅವನ ಭಾಷಣದಲ್ಲಿ 'ಮಿಸ್ಟ' ಮತ್ತು 'ಮಿಸ್ಟಿಸಿಜಮ್' ಎಂಬ ಶಬ್ದಗಳಲ್ಲಿ ಒಂದು ಎಂತಹದೋ ಶ್ಲೇಷವನ್ನು ಆಧರಿಸಿ ಅಸಂಬದ್ಧವಾಗಿ ಮಾತಾಡಿದ್ದು ಕಂಡಿತು. "ನಾನು ಮಿಸ್ಟಿಸಿಜಮ್‌ನಲ್ಲಿ ಕಂಡ ಸವಿ (ಮಿಷ್ಟಿ) ನಾನು ಅದರಲ್ಲಿ ಕಂಡ ಅಮೃತ, ನನ್ನ ಭಾಷಣದಲ್ಲಿ ಮನದಣಿಯು ವಷ್ಟು ಸವಿಯನ್ನು ತುಂಬುವುದು. ಮಧುರಂ, ಮಧುರಂ, ಮಧುರಂ." ಭಾಷಣವನ್ನು ಮುಂದುವರಿಸುತ್ತ ನಜರುಲ್ ತನ್ನನ್ನೂ ತನ್ನ ಆತ್ಮವನ್ನೂ ತನ್ನ ಆತ್ಮಕ್ಕೆ ಸೇರಿದ್ದೆಲ್ಲವನ್ನೂ ಅವನ ಪಾದತಲದಲ್ಲಿ ಅರ್ಪಿಸಿ ಎಲ್ಲವುಗಳಿಂದಲೂ ಬಿಡುಗಡೆಯನ್ನು ಪಡೆಯುತ್ತಿದ್ದೇನೆಂದು ಹೇಳಿದನು. ಕೇಳುವದಕ್ಕೇನೋ ಇದು ಚನ್ನಾಗಿತ್ತು ಆದರೆ ಅದರ ಸೂಚನೆ ಬೇರೆಯದೇ ಇದ್ದಿತು. ಇದರ ಮುಂದಿನ ತಿಂಗಳಲ್ಲಿಯೇ (ಎಪ್ರಿಲ 1941) ಮುಸ್ಲಿಮ ಸಮಿತಿಯ ಸಮ್ಮೇಲನದಲ್ಲಿ ಅವನು ಮತ್ತೆ ಇದೇ ಧಾಟಿಯಲ್ಲಿ ಮಾತಾಡಿದನು: "ನನ್ನ ಕೊಳಲು ಇನ್ನು ನುಡಿಯದಾದರೆ— ಇಲ್ಲಿ ನಾನು ಹೇಳುತ್ತಿರುವದು ಕವಿಯೆಂದಲ್ಲ, ನಿಮ್ಮಿಂದ ಪ್ರೀತಿಯನ್ನು ಪಡೆದವ ನೊಬ್ಬನೆಂದಷ್ಟೇ, ನಾನು ಇಲ್ಲಿ ಮಾತಾಡುವದು ಕೇವಲ ಅದೊಂದೇ ಅಧಿಕಾರ ದಿಂದ,—ನೀವೆಲ್ಲರೂ ದಯವಿಟ್ಟು ನನ್ನನ್ನು ಕ್ಷಮಿಸಬೇಕು. ನನ್ನನ್ನು ದಯವಿಟ್ಟು ಮರೆತುಬಿಡಿ. ನಿಜವಾಗಿಯೂ ಹೇಳುತ್ತೇನೆ, ನಾನು ಕವಿಯಾಗುವದಕ್ಕೆ ಹೇಳಿ ಮಾಡಿಸಿದವನಲ್ಲ; ನಾಯಕನಾಗುವದಕ್ಕೂ ಅಲ್ಲ. ನಾನು ನನ್ನ ಪ್ರೀತಿಯನ್ನು ಅರ್ಪಿಸುವದಕ್ಕೆ ಹುಟ್ಟಿದವನು. ಪ್ರೀತಿಯನ್ನು ನಾನು ಬೇಡಿದೆ. ಆ ಪ್ರೀತಿ ನನ್ನಲ್ಲಿ ಇರಲಿಲ್ಲ. ನಿರಾಶನಾಗಿ ಒಂದೂ ಮಾತಿಲ್ಲದೆ ಈ ಪ್ರೀತಿಯಿಲ್ಲದ ರೂಕ್ಷವಾದ ಪ್ರಪಂಚಕ್ಕೆ ಶರಣುಹೊಡೆಯುತ್ತೇನೆ."

ಇಲ್ಲಿಯವರೆಗೆ ಕೂಡ ಅವನ ಚಿತ್ತಸ್ವಾಸ್ಥ್ಯವು ಕದಡಿತ್ತೆಂದು ಹೇಳುವಂತಿರಲಿಲ್ಲ. ಸನ್ 1942 ರಲ್ಲಿ ಅವನು ಟಾಗೋರರ ಮರಣವನ್ನು ಕುರಿತ ಒಂದು ಕವಿತೆಯಲ್ಲಿ

ಕಣ್ಣೀರು ಬರಿಸುವಂತಹ ಮಾತುಗಳನ್ನು ಹೇಳಿದ್ದಾನೆ. ಫೆಬ್ರುವರಿ 1942 ರಲ್ಲಿ ಚಿಯಾಂಗ ಕೈಶೆಕ್ ಭಾರತಕ್ಕೆ ಬಂದಿದ್ದರು. ಕಾಂಗ್ರೆಸ ಪಕ್ಷದ ಸಹಾಯದಿಂದ ಭಾರತ-ಚೈನಾ ಜತೆಗೂಡಿ ಕಾದುವ ಬಗ್ಗೆ ಮಾತು ಕೇಳಿಬರುತ್ತಿದ್ದಿತು. ಈ ಸಂದರ್ಭದಲ್ಲಿ ನಜರುಲ್ ಚೈನಾ ನಾಯಕನನ್ನು ಸ್ವಾಗತಿಸಿ ಬರೆದ ಪದ್ಯಗಳ ಕಾವ್ಯಗುಣವೇನೇ ಇದ್ದರೂ ಅದು ಆ ಸಂದರ್ಭಕ್ಕೆ ಒಪ್ಪುವಂತಹ ಕೃತಿಯಾಗಿದ್ದಿತು.

ಒಂದು ಸಂಜೆ ಇದ್ದಕ್ಕಿದ್ದಂತೆ ನಜರುಲ್ ತನ್ನ ಶಾಮುಬಜಾರಿನಲ್ಲಿಯ ಮನೆಯಿಂದ ಕಾಣೆಯಾದನು. ಮರುದಿನ ಸಂಜೆಯವರೆಗೂ ಪತ್ತೆಯಾಗಲಿಲ್ಲ. ಆಗ ಅವನು ಶ್ರೀರಾಮಕೃಷ್ಣರ ಸ್ಥಾನವಾಗಿದ್ದ ದಕ್ಷಿಣೇಶ್ವರದ ಕಾಲೀ ದೇವಾಲಯದ ಹತ್ತಿರದ ದೊಡ್ಡಬೀದಿಯ ಮಧ್ಯದಲ್ಲಿ ನಡೆದುಕೊಂಡು ಹೋಗುತ್ತಿದ್ದದ್ದು ಕಂಡಿತು. ತನ್ನ ಸುತ್ತಮುತ್ತ ತೂರಿಕೊಂಡು ಹೋಗುತ್ತಿದ್ದ ಸೈನಿಕವಾಹನಗಳ ಪರವೆಯೇ ಅವನಿಗಿದ್ದಂತಿರಲಿಲ್ಲ. ಅವುಗಳಲ್ಲಿ ಯಾವುದೇ ಒಂದು ಯಾವುದೇ ಗಳಿಗೆಯಲ್ಲಿ ಅವನನ್ನು ನೆಲಕ್ಕೆ ಒರಸಿ ಹೋಗಬಹುದಿತ್ತು.

ಕೊನೆಗೊಮ್ಮೆ 1942 ಜುಲಾಯಿ 9 ನೆಯ ದಿನ ಅತ್ಯಂತಿಕ ಆಪತ್ತು ಬಂದೆರಗಿತು. ಅಂದು ಸಂಜೆಯಲ್ಲಿ ಅವನು ಆಕಾಶವಾಣಿಯ ಕಲಕತ್ತಾ ನಿಲಯದಲ್ಲಿ ಒಂದು ಪ್ರಸಾರದಲ್ಲಿ ತೊಡಗಿದ್ದನು. ಇದ್ದಕ್ಕಿದ್ದಂತೆ ಅವನ ಬಾಯಿಂದ ಮಾತೇ ಹೊರಡದಂತಾಯಿತು. ಮನೆಗೆ ಕರೆತರುವಷ್ಟರಲ್ಲಿ ಅವನ ಎಲ್ಲ ಮನೋವ್ಯಾಪಾರಗಳು ಕುಸಿಯುತ್ತಿರುವಂತೆ ಕಂಡಿತು. ಆಗ ಹಿಡಿದ ಗ್ರಹಣ ಪೂರ್ತಿಯಾಗಿ ಶಾಶ್ವತವಾಗಿ ಕವಿಯಿತು. ಸನ್ 1970 ರಲ್ಲಿ ಅವನು ಎರಡೇ ಎರಡು ಅಸಂಬದ್ಧ ವಾಕ್ಯಗಳನ್ನು ನುಡಿದನೆಂದು ಹೇಳುತ್ತಾರೆ—"ನಾನು ಡಾಕ್ಕಾಗೆ ಹೋಗಬೇಕು." "ನಾನು ಗಾಂಧೀಜಿಯನ್ನು ನೋಡಬೇಕು."

ಅವನ ಮನಸು ಸ್ವಾಧೀನ ತಪ್ಪಿದ ಸ್ವಲ್ಪಕಾಲದಲ್ಲಿಯೇ ವೈದ್ಯಕೀಯ ನೆರವನ್ನು ಪಡೆಯಲಾಯಿತು. ದಿ. ಡಾ. ಬಿ. ಸಿ. ರಾಯರು ಬಹಳವಾಗಿ ಹೆಣಗಿದರು. ಆದರೆ ಪ್ರಯೋಜನವಾಗಲಿಲ್ಲ. ಮಾನಸಿಕ ರೋಗಿಗಳಿಗಾಗಿ ಇದ್ದ ಲುಂಬೀನಿ ಪಾರ್ಕ ಹಾಸ್ಪಿಟಲ್‌ನಲ್ಲಿ ನಜರುಲ್‌ನನ್ನು ಸೇರಿಸಲಾಯಿತು. ಅಲ್ಲಿ ಅವನನ್ನು ದಿ. ಡಾ. ಜಿ. ಎಸ್. ಬೋಸರು ನೋಡಿಕೊಳ್ಳುತ್ತಿದ್ದರು. ಅಲ್ಲಿಯೂ ಗುಣ ಕಾಣಬರಲಿಲ್ಲ. ಅವನ ಮನೋರೋಗಕ್ಕೆ ದೈಹಿಕ ಕಾರಣಗಳಿದ್ದವೆಂದೂ ಅವು ಸರಿಪಡಿಸಲಾಗದ ಅವಸ್ಥೆಯನ್ನು ಮುಟ್ಟಿದ್ದವೆಂದೂ ಡಾ. ಬೋಸರು ಅಭಿಪ್ರಾಯ ಪಟ್ಟರು. ಅಂದಿನ ಯುದ್ಧಪರಿಸ್ಥಿತಿಯಲ್ಲಿ ವಿದೇಶಗಳಿಗೆ ಹೋಗಿ ವೈದ್ಯ ಸಹಾಯವನ್ನು ಪಡೆಯುವದು ಅಸಂಭವವಾಗಿತ್ತು. ಯಾವದೇ ಒಂದು ವಿಶಿಷ್ಟಕ್ರಮದ ಚಿಕಿತ್ಸೆಯನ್ನು ನಡೆಸಿಕೊಂಡು ಹೋಗುವದಕ್ಕೆ ಅವಕಾಶವಿರಲಿಲ್ಲ. ಸಹಾನುಭೂತಿಗೇನೂ ಕೊರತೆಯಿರಲಿಲ್ಲ. ಅವನಿಗೂ ನಿರ್ಗತಿಕವಾದ ಅವನ ಕುಟುಂಬಕ್ಕೂ ಸಹಾಯಮಾಡುವದಕ್ಕೆ ಅಂತಃಕರಣಪೂರ್ವಕವಾಗಿ ಅನೇಕರು ಯತ್ನಿಸಿದರು. ದಿ. ಶಾಮಾಪ್ರಸಾದ ಮುಖರ್ಜೀಯವರು ಒಂದು ಪರಿಹಾರ ಸಮಿತಿಯನ್ನು ಕೂಡಿಸಿಕೊಂಡು ಅವನ ಸಹಾಯಕ್ಕೆ ಹೆಣಗಿದರು. ಕವಿಯು ಮಾರಿಕೊಂಡಿದ್ದ ಹಾಗೂ ಅಡವು ಮಾಡಿದ್ದ ಸಾಹಿತ್ಯ

ಸಂಗೀತ ಕೃತಿಗಳ ಕಾಪಿರೈಟುಗಳನ್ನು ಮರಳಿ ಪಡೆಯುವದು ಸಮಿತಿಗೆ ಸಾಧ್ಯವಾಗಲಿಲ್ಲ. ಕಾಲಕ್ರಮದಲ್ಲಿ ಸಮಿತಿಯು ಉತ್ಸಾಹ ತಗ್ಗುತ್ತ ಅದು ನಿಷ್ಕ್ರಿಯವಾಯಿತು. ನಜರುಲ್ ಸ್ಥಿತಿ ದಿನ ದಿನಕ್ಕೆ ಕ್ಷೀಣಿಸುತ್ತಿತ್ತು.

ದೈಹಿಕವಾಗಿಯೂ ಮಾನಸಿಕವಾಗಿಯೂ ನಿಷ್ಕ್ರಿಯನಾಗಿದ್ದ ನಜರುಲ್‌ನನ್ನೂ, ಹಾಸಿಗೆ ಹಿಡಿದಿದ್ದ ಅವನ ಹೆಂಡತಿಯನ್ನೂ ನೋಡಿಕೊಳ್ಳುವದಲ್ಲದೆ ಮನೆಯನ್ನು ನಡೆಸುವ ಎಲ್ಲ ಹೊಣೆಯನ್ನೂ ಇಷ್ಟುಕಾಲವೂ ಹೊತ್ತಿದ್ದ ಅವನ ಅತ್ತೆ ಗಿರಿಬಾಲಾದೇವಿ ಸನ್ 1946 ರಲ್ಲಿ ಒಂದು ದಿನ ಅದೃಶ್ಯಳಾದಳು. ಮನೆಯಲ್ಲಿಯ ದುರವಸ್ಥೆಯ ಒತ್ತಡವನ್ನು ತಡೆಯಲಾರದೆ ಹೀಗೆ ಅವಳು ಬೇರೆ ಗತಿಯನ್ನು ಕಾಣದೆ ದೇವರ ಆಶ್ರಯವನ್ನು ಹುಡುಕಿಕೊಂಡು ಎಲ್ಲಿಯೋ ಹೋಗಿಬಿಟ್ಟಳು. ಅವಳು ಏನಾದಳೆಂಬದು ಗೊತ್ತಾಗಲೇ ಇಲ್ಲ. ಅದೇ ಆಗ ದೇಶವು ಸ್ವತಂತ್ರವಾಗಿತ್ತು. ಪಶ್ಚಿಮ ಬಂಗಾಲ ಸರಕಾರವು ಕವಿಯ ಹೆಸರಿನಲ್ಲಿ ತಿಂಗಳಿಗೆ ಇನ್ನೂರು ರೂಪಾಯಿಗಳ ಸಹಾಯವನ್ನು ಕೊಡಮಾಡಿತು. ಪ್ರಮಿಳಾ ತನ್ನ ಹಾಸಿಗೆಯಲ್ಲಿ ಮಲಗಿಕೊಂಡಲ್ಲಿಂದಲೇ ಇಷ್ಟು ಹಣದಲ್ಲಿ ತನ್ನ ತನ್ನ ಪತಿಯ ತನ್ನ ಬೆಳೆಯುತ್ತಿದ್ದ ಇಬ್ಬರು ಮಕ್ಕಳ ಪ್ರಪಂಚವನ್ನು ತೂಗಿಸಬೇಕಾಗಿತ್ತು. ಈ ಹೊಣೆಯನ್ನು ನಿರ್ವಹಿಸುತ್ತಲೇ ಅವಳು 1962 ಜೂನ 30 ರಂದು ತೀರಿಕೊಂಡಳು. ಇಪ್ಪತ್ತಮೂರು ವರ್ಷಗಳ ಕಾಲ ತನ್ನ ಅಸಹಾಯಕ ಸ್ಥಿತಿಯನ್ನು ಲೆಕ್ಕಿಸದೆಯೇ ತನ್ನ ಗಂಡನ ಆರೈಕೆಯನ್ನೂ ಕುಟುಂಬದ ಹೊಣೆಯನ್ನೂ ಹೊತ್ತು ಹೋರಾಡಿದ ಈ ಧೀರ ಮಹಿಳೆಗೆ ಬಂಗಾಳೀ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟವಾದ ಶಾಶ್ವತವಾದ ಸ್ಥಾನವಿದೆ.

ಇದಾಗುವದಕ್ಕೆ ಹತ್ತು ವರ್ಷ ಮುಂಚೆ 1952 ರಲ್ಲಿ ನಜರುಲ್ ಮಿತ್ರರು ಒಂದು ವೈದ್ಯಕೀಯ ಸಹಾಯ ಸಮಿತಿಯನ್ನು ಕಟ್ಟಿಕೊಂಡು ನಜರುಲ್‌ಗೆ ವಿದೇಶಗಳಲ್ಲಿ ಚಿಕಿತ್ಸೆಯ ಏರ್ಪಾಡು ಮಾಡುವದಕ್ಕೆ ಯತ್ನಿಸಿದರು. ಮೇ 1953 ರಲ್ಲಿ ಈ ಮಿತ್ರರು ನಜರುಲ್ ಪ್ರಮಿಳಾರೊಡನೆ ಯೂರೋಪಿಗೆ ಹೋಗಿ ವಿಎನ್ನಾ ಮತ್ತು ಲಂಡನ್‌ಗಳಲ್ಲಿ ತಜ್ಞರ ಸಲಹೆಗಳನ್ನು ಪಡೆದರು. ಸೋವಿಯತ್ ದೇಶದ ಕೆಲವು ತಜ್ಞರನ್ನೂ ಕೇಳಿದರು. ಉಪಾಯ ಮಾಡುವದಕ್ಕೆ ಕಾಲ ಮೀರಿ ಹೋಗಿದೆ ಎಂಬದೇ ಎಲ್ಲರದೂ ಅಭಿಪ್ರಾಯವಾಗಿತ್ತು. ಅವರೆಲ್ಲರೂ ನಿರುಪಾಯರಾಗಿ ಕಲಕತ್ತೆಗೆ ಮರಳಿದರು. ನಜರುಲ್ ಗುಣಹೊಂದುವ ಕೊನೆಯ ಆಶಾಕಿರಣವೂ ಮರೆಯಾಯಿತು.

ಸನ್ 1962 ರಲ್ಲಿ ನಜರುಲ್ ಪತ್ನಿ ತೀರಿಕೊಂಡ ನಂತರ ನಜರುಲ್ ಜೀವನದಲ್ಲಿ ಹೇಳಿಕೊಳ್ಳುವಂತಹ ಬದಲಾವಣೆಗಳೇನೂ ನಡೆದಿಲ್ಲ. ಅವನ ಇಬ್ಬರೂ ಮಕ್ಕಳು ದೊಡ್ಡವರಾಗಿ ಮದುವೆ ಮಾಡಿಕೊಂಡು ಮಕ್ಕಳನ್ನು ಪಡೆದಿದ್ದಾರೆ. ನಜರುಲ್ ತನ್ನ ಹಿರಿಯ ಮಗ ಕಾಜಿ ಸವ್ಯಸಾಚಿಯೊಡನೆ ಸಿ ಐ ಟಿ ಫ್ಲಾಟ ಕಲಕತ್ತ 14 ಎಂಬಲ್ಲಿ ಇರುತ್ತಾನೆ. [ಇದು ನಜರುಲ್ ಜೀವಿಸಿದ್ದಾಗ ಬರೆದದ್ದು]. ಕಾಜಿ ಸವ್ಯಸಾಚಿ ತನ್ನ ತಂದೆಯ ಕೃತಿಗಳನ್ನು ಮನೋಜ್ಞವಾಗಿ ಹಾಡುವವನೆಂದು ಖ್ಯಾತಿಪಡೆದಿದ್ದಾನೆ. ಕಿರಿಯಮಗ ಕಾಜಿ ಅನಿರುದ್ಧ ಕುಶಲನಾದ ಗಿಟಾರವಾದಕನೆಂದು ಪ್ರಸಿದ್ಧಿ ಪಡೆದಿದ್ದಾನೆ. ಇನ್ನುಳಿದದ್ದೆಲ್ಲ ಜನಗಳು ಕವಿಗೆ ತೋರಿದ ಪ್ರೀತಿ ಆದರಗಳ ಕತೆ

ಮಾತ್ರ. ಅವನ ಜನ್ಮದಿನವನ್ನೊಂದು ರಾಷ್ಟ್ರೀಯ ಸಮಾರಂಭವೆನ್ನುವಂತೆ ಅಭಿಮಾನ ಉತ್ಸಾಹಗಳಿಂದ ಆಚರಿಸಲಾಗುತ್ತದೆ. ಪಶ್ಚಿಮಬಂಗಾಲ ಸರಕಾರವು ಕವಿಗೆ ಔಷಧೋಪಚಾರಗಳನ್ನು ನಿಶ್ಶುಲ್ಕವಾಗಿ ಒದಗಿಸುವದಲ್ಲದೆ ಅವನ ಮಾಸಾಶನವನ್ನು ಇನ್ನೂರು ರೂಪಾಯಿಗಳಿಂದ ಮುನ್ನೂರು ರೂಪಾಯಿಗಳಿಗೆ ಹೆಚ್ಚಿಸಿದೆ. ಪೂರ್ವ ಪಾಕಿಸ್ತಾನ ಸರಕಾರವು ಮಂಜೂರು ಮಾಡಿದ್ದ ಮುನ್ನೂರೈವತ್ತು ರೂಪಾಯಿಯ ಮಾಸಾಶನವನ್ನು ಮಾರ್ಚ 1971 ರ ಕ್ರಾಂತಿಯ ಕಾಲದಲ್ಲಿ ತಡೆಹಿಡಿಯಲಾಗಿತ್ತು. ತರುವಾಯದಲ್ಲಿ ಬಂಗಲಾ ದೇಶದ ಸರಕಾರವು ಅದನ್ನು ಮತ್ತೆ ಕೊಡುತ್ತಿದೆ. ಭಾರತದ ರಾಷ್ಟ್ರಪತಿಗಳು ಕವಿಯನ್ನು "ಪದ್ಮಭೂಷಣ" ಎಂದು ಗೌರವಿಸಿದ್ದಾರೆ. ಕಲಕತ್ತಾ ಯೂನಿವರ್ಸಿಟಿಯು ತನ್ನ ಅಮೂಲ್ಯವಾದ "ಜಗತ್ತಾರಿಣಿ ಸ್ವರ್ಣ ಪದಕ"ವನ್ನಿತ್ತು ಕವಿಯನ್ನು ಗೌರವಿಸಿದೆ, ಸನ್ 1967 ಮತ್ತು 1969 ರಲ್ಲಿ ಅಧಿಕಾರಕ್ಕೆ ಬಂದ ಪಶ್ಚಿಮಬಂಗಾಲದ ಸಂಯುಕ್ತರಂಗದ ಸರಕಾರಗಳು ಕವಿಯ ವಾಸಕ್ಕಾಗಿ ಮತ್ತು "ನಜರುಲ್ ಸಂಶೋಧನ ಸಂಸ್ಥೆ" ಗಾಗಿ ಒಂದು ಕಟ್ಟಡ ಕಟ್ಟುವದನ್ನು ನಿರ್ಧರಿಸಿದವು. ಸನ್ 1969 ರಲ್ಲಿ ಕಲಕತ್ತಾ ಕಾರ್ಪೊರೇಶನ್ನಿನವರು ನಗರದಿಂದ ಡಮಡಮ ವಿಮಾನ ನಿಲ್ದಾಣಕ್ಕೆ ಹೋಗುವ ರಸ್ತೆಗೆ ಕಾಜಿ ನಜರುಲ್ ಇಸ್ಲಾಮ ರಸ್ತೆಯೆಂದು ಹೆಸರಿಟ್ಟರು. ಆದರೆ ಸಂಯುಕ್ತರಂಗದ ಸರಕಾರದವರು ಮಾಡಿದ ಅತಿಮಹತ್ವದ ನಿರ್ಣಯವು ಕಾರ್ಯಗತವಾಗದೆ ಉಳಿದಿರುವದಕ್ಕೆ ಕೆಲವು ಜನಗಳು ಒಡ್ಡಿದ ಕಾನೂನು ಸಮಸ್ಯೆಗಳು ಕಾರಣವಾಗಿವೆಯೆಂದು ತೋರುತ್ತದೆ. ಈ ನಿರ್ಣಯವೆಂದರೆ ನಜರುಲ್ ಸಮಗ್ರ ಕೃತಿಗಳನ್ನು ಸುಲಭವಾದ ಬೆಲೆಯಲ್ಲಿ ಎಲ್ಲರಿಗೂ ದೊರೆಯುವಂತೆ ಪ್ರಕಟಿಸುವದು. ಈ ಪ್ರಕಟನೆಯಲ್ಲಿ ಅವನ ಹಾಡುಗಳಿಗೆ ಸ್ವರಪ್ರಸ್ತಾರವನ್ನೂ ಸೇರಿಸಲಾಗುವದು. ಭಾರತ ಮತ್ತು ಬಂಗಲಾ ದೇಶದ ಸರಕಾರಗಳೂ, ಎರಡು ಬಂಗಾಲಗಳ ಜನತೆಯೂ, ಕವಿಯ ಮೇಲಿನ ಪ್ರೀತಿಯನ್ನು ವ್ಯಕ್ತಪಡಿಸುವದಕ್ಕೆ ನಾವುಂದೆ ನೀಮುಂದೆ ಎಂದು ಮಾಡಬೇಕಾದ ಅವಶ್ಯವಾದ ಕೆಲಸವೆಂದರೆ ಕವಿಯ ಎಲ್ಲ ಕೃತಿಗಳನ್ನೂ ಶೋಧಿಸಿ ಸಂಗ್ರಹಿಸಿ ವ್ಯವಸ್ಥಿತವಾಗಿ ಪ್ರಕಟಿಸುವದು. ಇದು ಎರಡೂ ಜನಾಂಗಗಳ ಅಮೂಲ್ಯವಾದ ಆಸ್ತಿಯಾಗಿದೆ.

# 7. ನಜರುಲ್ ಕೊನೆಯ ಮಾತು

ಕಲಾಪ್ರಪಂಚದ ಮಟ್ಟಿಗೆ ನಜರುಲ್ ಚರಿತ್ರೆ ಇಲ್ಲಿಗೆ ಮುಗಿಯಿತೆಂದು ತೋರುತ್ತದೆ. ಯಾವುದೋ ಅಲೌಕಿಕ ಶಕ್ತಿಯಿಂದ ಅವನು ಮತ್ತೆ ಚೇತರಿಸಿಕೊಂಡರೆ ಮುಂದಿನ ಮಾತು. (ಇದು ನಜರುಲ್ ಜೀವಿಸಿದ್ದಾಗ ಬರೆದದ್ದು). ಸುಮಾರು ಐವತ್ತು ವರ್ಷಗಳ ಹಿಂದೆ ಅವನು ಮೊದಲಿಗೆ ಕಲಾಪ್ರಪಂಚದಲ್ಲಿ ಕಾಣಿಸಿಕೊಂಡಂದಿನಿಂದಲೂ ಅವನು ಪ್ರತಿಭಾನ್ವಿತನೆನ್ನುವ ಬಗ್ಗೆ ಯಾವ ಸಂಶಯುವೇ ಇರಲಿಲ್ಲ. ಜನತೆಯ ಕವಿಯಾಗಿ, ಸಂಕೋಚವಿಲ್ಲದ ಪ್ರಯೋಗಶೀಲನಾಗಿ, ರಾಷ್ಟ್ರೀಯ ಸಂಗ್ರಾಮದ ಯೋಧನಾಗಿ, ಮಾನವತೆಯ ಮೂಲಭೂತ ಹಕ್ಕುಗಳನ್ನು ಸಾರುವವನಾಗಿ, ಮೋಹಕವಾದ ಹಾಡುಗಳನ್ನು ಹಾಡುವವನಾಗಿ, ಕಲಾಪ್ರಪಂಚಕ್ಕೆ ಅವನು ಸಲ್ಲಿಸಿದ ಬಹುಮುಖವಾದ ಕಾಣಿಕೆಯನ್ನು ಸಮರ್ಥರಾದ ವಿಮರ್ಶಕರು ಆದರಿಸಿದಂತೆಯೇ ಅವನ ಕೋಟ್ಯಾಂತರ ದೇಶಬಾಂಧವರೂ ಆದರಿಸಿದ್ದಾರೆ. ಆ ಒಳುವಳಿಯನ್ನೆಲ್ಲ ಇನ್ನೂ ಸಂಗ್ರಹಿಸಿ ಸಂಶೋಧಿಸಬೇಕಾದ ಕೆಲಸ ಬಹಳವಿದೆ.

ಸಮಕಾಲೀನ ಬಂಗಾಲಿ ಜೀವನ ಮತ್ತು ಸಾಹಿತ್ಯದ 'ರವೀಂದ್ರಯುಗ'ದಲ್ಲಿ ರವೀಂದ್ರರಿಗೆ ಎರಡನೆಯುವನಾದ ಕವಿ ನಜರುಲ್ ಎಂದು ಸಾಮಾನ್ಯವಾಗಿ ಎಲ್ಲರೂ ಒಪ್ಪಿದ್ದಾರೆ. ರವೀಂದ್ರರೊಬ್ಬರನ್ನು ಬಿಟ್ಟರೆ ಇವನಂತೆ ಸಾಹಿತ್ಯ ಸಂಗೀತ ಎರಡರಲ್ಲಿಯೂ ಗಣನೀಯುವಾದ ಯಶಸ್ಸನ್ನು ಸಾಧಿಸಿದವರಿಲ್ಲವೆಂದೇ ಹೇಳಬಹುದು. ಟಾಗೋರರಿಗೆ ಋಣಿಗಳಾಗಿದ್ದೂ ತಮ್ಮ ಸ್ವತಂತ್ರ ವ್ಯಕ್ತಿತ್ವವನ್ನು ಮೆರೆಸಿದ ಕೆಲವೇ ಬಂಗಾಲಿ ಕವಿಗಳಲ್ಲಿ ಸತ್ಯೇಂದ್ರನಾಥ ದತ್ತ, ಜತೀಂದ್ರನಾಥ ಸೇನಗುಪ್ತ, ಮೋಹಿತಲಾಲ ಮುಜುಮದಾರರನ್ನು ಹೆಸರಿಸಬಹುದು. ಆದರೆ ತಾನು ಸ್ವತಂತ್ರನೆಂದು ತೋರಿಸುವದಕ್ಕಾಗಲಿ, ಟಾಗೋರರ ಪ್ರಭಾವಕ್ಕೆ ಒಳಗಾಗಿಲ್ಲವೆಂದು ತೋರಿಸುವದಕ್ಕಾಗಲಿ ಇವರಂತೆ ನಜರುಲ್ ತನ್ನ ಕೃತಿಗಳ ಆಕಾರ ಶೈಲಿಗಳಲ್ಲಿ ಯಾವ ಗಿಮಿಕುಗಳನ್ನೂ ಬಳಸಲಿಲ್ಲ. ಅಂತಹ ಯಾವ ಪ್ರಯತ್ನಗಳನ್ನು ಮಾಡದೆಯೇ ಅವನು ಮೊದಲಿನಿಂದಲೂ ಟಾಗೋರರಂತಲ್ಲವೆಂಬದು ಅವನ ವಿಚಾರಗಳಲ್ಲಿಯೂ ಸ್ಪಷ್ಟವಾಗಿ ಎದ್ದುಕಾಣುತ್ತದೆ. ಈ ಪ್ರವೃತ್ತಿ ಯಾವಾಗಲೂ ಅವನಿಗೆ ಅನುಕೂಲವಾಗಿಯೇ ಪರಿಣಮಿಸಿದೆಯೆಂದು ಹೇಳಲಾಗದು. ಉದಾಹರಣೆಗೆಂದರೆ, ಅವನ ಮನೋವ್ಯಾಪಾರ ಎಂದೂ ಬುದ್ಧಿಪ್ರಧಾನವಾದುದಲ್ಲ. ಅದಕ್ಕಾಗಿ ಅವನು ಯತ್ನಿಸಿದವನೂ ಅಲ್ಲ. ಅವನಿಗೆ ಮುಖ್ಯವಾದದ್ದು ಭಾವ, ಅದೇ ಅವನ ಕಾವ್ಯದ ಸ್ಫೂರ್ತಿ. ಅದರ ಒರೆಗಲ್ಲೂ ಅಹುದು. ನಜರುಲ್‌ನ ಅಸಾಧಾರಣವಾದ ಜನಪ್ರಿಯತೆಗೆ ಕಾರಣ

ಗಳೆಂದರ ಅವನ ಕಾವ್ಯದಲ್ಲಿರುವ ಜಾಜ್ವಲ್ಯಮಾನವಾದ ಭಾವಾವೇಶ, ಮೋಹಕ ವಾದ ಸರಳತೆ, ಮತ್ತು ಅಪಾರವಾದ ಬಲ ಮತ್ತು ಚೈತನ್ಯಗಳು.

ಸಹಜವಾಗಿಯೂ, ಉದ್ದೇಶಪೂರ್ವಕವಾಗಿಯೂ, ನಜರುಲ್ ಜನತೆಯ ಕವಿ. "ಕಲೆಯಿರುವದು ಜನತೆಗಾಗಿ" ಎಂಬ ಲೆನಿನ್‌ವಾಕ್ಯ ಅವನಿಗೆ ತಿಳಿದಿತ್ತೊ, ಇಲ್ಲವೊ ಆದರೆ ಈ ವಿಶ್ವಾಸ ಉದ್ದಕ್ಕೂ ಅವನ ಬರವಣಿಗೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಪ್ರತಿಷ್ಠಿತರಿಗಾಗಿ ಬರೆಯುವವನು ತಾನಲ್ಲವೆಂದು ಅವನೇ ಅನೇಕ ಸಲ ಸ್ಪಷ್ಟವಾಗಿ ಹೇಳಿದ್ದಾನೆ. ತನ್ನ ಸುತ್ತಣ ಪರಿಸ್ಥಿತಿ ಜನಜೀವನಗಳಿಂದ ಅವನು ಪ್ರಭಾವಿತನಾಗುವದು ಅನಿವಾರ್ಯವಾಗಿತ್ತು. ಅವನ ಸಹಜವಾದ ಪ್ರತಿಭೆ ಕಲ್ಪನೆಗಳು, ಅಸ್ಖಲಿತವಾದ ಶಬ್ದ ಪ್ರವಾಹ, ಹಾಸ್ಯ ಕಟುಕಿಗಳು ಅವನ ಹತೋಟಿ ತಪ್ಪಿ ಹರಿದು ಅವನ ಕೃತಿಗಳಲ್ಲಿಯ ಕಲಾದೃಷ್ಟಿಗೆ ಒಮ್ಮೊಮ್ಮೆ ಊನವೆಂದು ಕಂಡಿರಬಹುದು. ಆದರೆ ಸ್ವಚ್ಛಂದವಾಗಿ ಹೊರ ಹೊಮ್ಮುವ ಅವನ ಭಾವಾವೇಶದಲ್ಲಿ ಕೃತ್ರಿಮತೆಯ ಸುಳಿವು ಎಲ್ಲಿಯೂ ಕಾಣದು.

ಸಂಗೀತ ಪ್ರಪಂಚದಲ್ಲಿಯೂ ತನಗೆ ಸಂಬಳವನ್ನು ಕೊಡುತ್ತಿದ್ದವರಿಗಾಗಿ ಅವನು ಒಂದೇ ದಿನದಲ್ಲಿ ಹತ್ತು ಹದಿನೈದು ಹಾಡುಗಳನ್ನೂ ಅವುಗಳಿಗೆ ಸ್ವರ ಸಂಯೋಜನೆಗಳನ್ನೂ ರಚಿಸಿದ್ದುಂಟು. ಇಂತಹ ಸಂದರ್ಭಗಳಲ್ಲಿ ಅವನ ವಿಪುಲವಾದ ಸೃಜನಶಕ್ತಿಯೇ ಒಂದು ಅನನುಕೂಲವಾಗಿ ಪರಿಣಮಿಸಿ ಗುಣಮಟ್ಟದಲ್ಲಿ ಏರಿಳಿತ ಗಳನ್ನು ಕಾಣಿಸಿರಬಹುದು; ರಚನೆ ನಿಸ್ತೇಜವೆಂದೂ ಬರಿ ಶಬ್ದಾಡಂಬರವೆಂದೂ ಕಂಡಿರಬಹುದು; ಭಾವಾವೇಶ ಎಳೆದು ತಂದದ್ದೆಂದು ತೋರಬಹುದು; ಒಮ್ಮೊಮ್ಮೆ ಭಾವದ ಮಹೋನ್ನತಿಯಿಂದ ಆಭಾಸಕ್ಕೆ ಇಳಿಯಿತೆಂದೂ ಅನ್ನಿಸಬಹುದು. ಆದರೆ ಸಹಜಸ್ಫೂರ್ತಿಯ ತುಂಬು ಪ್ರವಾಹದಲ್ಲಿ ಅನಿವಾರ್ಯವಾದ ಇಂತಹ ಚಿಕ್ಕಪುಟ್ಟ ದೋಷಗಳು ಲೆಕ್ಕಕ್ಕಿಲ್ಲವೆನ್ನಿಸುವ ಮಟ್ಟಿಗೆ ಅವನ ರಚನೆಗಳಲ್ಲಿ ಖಚಿತವಾದ ಗುಣ ಗಳೂ ಇವೆ; ಬಂಧದಲ್ಲಿ ದೃಢತೆ, ಭಾವದಲ್ಲಿ ಶಕ್ತಿ ಮತ್ತು ತೀವ್ರತೆ, ಶಬ್ದಸಂಯೋಜನೆ ಯಲ್ಲಿ ಚಾತುರ್ಯ, ಪಾರಸೀ-ಅರಬ್ಬೀ ಶಬ್ದಗಳನ್ನು ಸಂಸ್ಕೃತ-ಬಂಗಾಲೀ ಶಬ್ದ ಗಳೊಡನೆ ಬೆರಸುವದರಲ್ಲಿ ಅಸಾಧಾರಣವಾದ ಜಾಣ್ಮೆ ಇತ್ಯಾದಿ. ಅವನು ನಿರೂಪಿಸುವ ಪ್ರೇಮಭಾವದ ವಿಸ್ತಾರದಲ್ಲಿ ದೈಹಿಕವಾದ ಕಾಮದಿಂದ ಆತ್ಮದ ತಲ್ಲೀನತೆಯ ವರೆಗೆ ಅನೇಕ ಸೂಕ್ಷ್ಮತರವಾದ ಸ್ತರಗಳಿವೆ. ಅವನ ಕಾವ್ಯದಲ್ಲಿ ದೇಶಕ್ಕಾಗಿ ಪ್ರೀತಿ, ದೇಶಬಾಂಧವರಿಗಾಗಿ ಕಳಕಳಿ, ಹಿಂದೂ-ಮುಸ್ಲಿಮರ ಸಖ್ಯ, ಮೊದಲಾದ ವಸ್ತುಗಳು ಹಾಸುಹೊಕ್ಕಾಗಿ ಹೆಣೆದುಕೊಂಡಿವೆ. ರಾಷ್ಟ್ರಗಳ ಎಲ್ಲೆಗಳನ್ನು ಮೀರಿದ ಬಂಧುಭಾವ, ಮಾನವನ ಸಹಜವಾದ ಹಕ್ಕುಗಳು, ಮನುಷ್ಯ ಜೀವನದಲ್ಲಿ ಸತ್ಯ ಸುಂದರ ಎನ್ನಿಸುವ ಎಲ್ಲವನ್ನೂ ಅವನ ಕೃತಿಗಳು ಎತ್ತಿಹಾಡುತ್ತವೆ. ಇವೆಲ್ಲ ಮತ್ತು ಇಂತಹ ಇನ್ನೂ ಅನೇಕ ಗುಣಗಳಿಂದಾಗಿ ನಜರುಲ್‌ನು ಬಂಗಾಲೀ ಸಾಹಿತ್ಯದ ಈ ಮಹೋದಯ ಕಾಲದಲ್ಲಿ "ಎರಡನೆಯ ಕವಿ"ಯ ಸ್ಥಾನವನ್ನು ಪಡೆದಿದ್ದಾನೆ.

ನಜರುಲ್ ಕೃತಿಗಳಲ್ಲಿ ಒಟ್ಟಾರೆ "ಘನವಾದ ಉದ್ದೇಶ"ವೇನಾದರೂ ಇದೆಯೇ ಎಂಬ ಪ್ರಶ್ನೆ ಏಳಬಹುದು. ಏಕೆಂದರೆ ನಜರುಲ್ ಮೊದಲು ಬೆಳಕಿಗೆ ಬಂದದ್ದು 'ಬಿದ್ರೋಹಿ ಕವಿ' ಎಂದೇ ಆದ್ದರಿಂದ ಬಿದ್ರೋಹಕ್ಕಿಂತ ಹೆಚ್ಚಿನದೇನನ್ನೂ ಅವನು

ಮೂಡಲಿಲ್ಲವೆಂದು ಅನೇಕರು ಭಾವಿಸಬಹುದು. ತನಗೆ ಅಂಟಿಕೊಂಡ ಈ 'ಬಿದ್ರೋಹಿ' ಬಿರುದನ್ನು ಅವನು ಎಂದೂ ಅಲ್ಲಗಳೆಯಲಿಲ್ಲವೆಂಬದೂ ನಿಜವೇ. ಸಾಮಾನ್ಯವಾಗಿ ತುಂಬುಜೀವನದ ಕೊನೆಯಲ್ಲಿ ಬರುವ ಪರಿಪಕ್ವತೆಗೆ ಅವನ ಜೀವನದಲ್ಲಿಯ ಅನಿರೀಕ್ಷಿತ ಆಘಾತದಿಂದಾಗಿ ಅವನಿಗೆ ಅವಕಾಶವೇ ದೊರೆಯದೇ ಹೋದದ್ದು ಅವನ ದುರ್ದೈವ, ನಮ್ಮ ದುರ್ದೈವವೂ ಅಹುದು. ಆದರೂ ಅವನ ಜೀವನವನ್ನು ಅಲ್ಲೋಲಕಲ್ಲೋಲವಾಗಿಸುವದಕ್ಕೆ ಅವನಲ್ಲಿ ಆಳವಾದ ಪ್ರೇರಣೆಗಳಿದ್ದವೆಂಬದನ್ನು ಗುರುತಿಸಬಹುದು. ಅವನನ್ನು ಕವಿದುಕೊಂಡಿರುವ ಮಬ್ಬು ಹರಿದರೆ ಅವನ ಜೀವನೋದ್ದೇಶದ ಸಂಶೋಧನೆಯು ಉಜ್ವಲವಾಗಿ ಮುಂದೆ ಸಾಗಬಹುದು. (ಇದು ನಜರುಲ್ ಜೀವಿಸಿದ್ದಾಗ ಬರೆದದ್ದು). ಈ ಸಂದರ್ಭದಲ್ಲಿ ವಿಶೇಷವಾಗಿ ಅವನ "ಸಿಂಧು-ಹಿಂದೋಳ" ಎಂಬ ಕಾವ್ಯ ಸಂಗ್ರಹವನ್ನೂ, ಅವನ ಶ್ರದ್ಧೆಯ ಆವಿಷ್ಕಾರ ವೆನ್ನಬಹುದಾದ "ಆಮಾರ ಸುಂದರ" ಎಂಬ ಕವಿತೆಯನ್ನೂ ನೋಡಬಹುದು.

ನಜರುಲ್ ಪರಿಪಕ್ವ ದೆಸೆಯಲ್ಲಿ ಯಾವ ಉನ್ನತಿಯನ್ನು ಮುಟ್ಟಬಹುದೆಂಬ ಸೂಚನೆಯನ್ನು ಕೊಡಬಲ್ಲ ಕೆಲವು ಕವಿತೆಗಳು 'ಸಿಂಧು ಹಿಂದೋಳ' ಸಂಗ್ರಹದಲ್ಲಿವೆ. ಅದಕ್ಕೆ ಹೆಸರುಕೊಟ್ಟಿರುವ ಮುಖ್ಯವಾದ ಕವಿತೆ 'ಸಿಂಧು ಹಿಂದೋಳ' ಮತ್ತು ಇನ್ನೆರಡು ಮಹತ್ತ್ವವುಳ್ಳ ಕೃತಿಗಳು "ಅನಾಮಿಕಾ" ಮತ್ತು "ದಾರಿದ್ರ್ಯ" ಎಂಬವು. ನಜರುಲ್‌ನ ಮಿತ್ರನಾದ ಮುಜಪ್ಫರ ಅಹಮ್ಮದನ ಊರು ಸಾಂದ್ವೀಪ ಎಂಬ ನಡುಗಡ್ಡೆಯಲ್ಲಿದೆ. ಅದು ಬಂಗಾಲಕೊಲ್ಲಿಯಲ್ಲಿ ಚಿತ್ತಗಾಂವ ಬಂದರಿನಿಂದ ಸ್ವಲ್ಪ ದೂರದಲ್ಲಿದೆ. ಅಲ್ಲಿಗೆ ನಜರುಲ್ ಒಮ್ಮೆ ಹೋದಾಗ ಅವನ ಮಿತ್ರ ಮುಜಫ್ಫರ ಅಹಮ್ಮದನು ವಿಚಾರಣೆ ನಡೆಯಬೇಕಾಗಿದ್ದ ಅಪರಾಧಿ ಎಂದು ವಿಾರತ ಜೈಲಿ ನಲ್ಲಿದ್ದನು. ನಜರುಲ್ ಸಾಂದ್ವೀಪಕ್ಕೆ ಸ್ಟೀಮರಿನಲ್ಲಿ ಮಾಡಿದ ಚಿಕ್ಕ ಪ್ರಯಾಣವೇ ಸಿಂಧುಹಿಂದೋಳ ಕವಿತೆಯ ವಸ್ತುವಾಗಿದೆ. ಅದು ಮೂರು ಭಾಗಗಳಲ್ಲಿದೆ. ಮೊದಲನೆಯ ಭಾಗದಲ್ಲಿ ಸಮುದ್ರವನ್ನು ಸಂಬೋಧಿಸಿ ಕವಿಯು ನುಡಿಯುತ್ತಾನೆ— ಸೌಂದರ್ಯ ಆನಂದಗಳಲ್ಲಿ ತನಗಿದ್ದಂತಹ ಆಳವಾದ ಆಸಕ್ತಿಯೂ, ತಿಳಿವಿಗೆ ಮಿಾರಿ ದ್ದನ್ನು ತಿಳಿಯುವ ಕಾತರತೆಯೂ, ಸಮುದ್ರಕ್ಕೂ ಇರಬಹುದೆಂದು ಭಾವಿಸುತ್ತಾನೆ. ಎರಡನೆಯ ಭಾಗದಲ್ಲಿ ಪ್ರೇಮವೇ ಘನವಾದದ್ದು ಕಲ್ಯಾಣಕರವಾದದ್ದು ಎಂದು ಪ್ರತಿ ಪಾದಿಸುತ್ತಾನೆ. ತಾನೊಬ್ಬ "ವಿರಹಿ" ಎಂದು ಭಾವಿಸಿ "ನಿನಗೂ ನನ್ನ ಗತಿಯೇ ಆಗಿದೆಯೆ?" ಎಂದು ಸಮುದ್ರವನ್ನು ಕೇಳುತ್ತಾನೆ. ಮೂರನೆಯ ಭಾಗದಲ್ಲಿ ಸಮುದ್ರ ವೊಬ್ಬ ಮಹಾತ್ಮನಾದ ಪ್ರಣಯಿ ಎಂದೂ ತನ್ನಲ್ಲಿರುವದನ್ನೆಲ್ಲಾ ಪ್ರಪಂಚಕ್ಕೆ ಕೊಟ್ಟು ಅದಕ್ಕೆ ಪ್ರತಿಯಾಗಿ ಏನನ್ನೂ ಬಯಸದೆ ಇರುವನೆಂದೂ ಭಾವಿಸಲಾಗಿದೆ. ಅಂತಹ ಸಮುದ್ರ ಕವಿಯ ಆಪ್ತ ಮಿತ್ರ. ಕವಿ ಅವನಿಗೆನ್ನುತ್ತಾನೆ—

"ಸುಂದರ ಆಮಾರ
ನಮಸ್ಕಾರ
ತುಮಿ ಕಾಂದೋ, ಆಮಿ ಕಾಂದೀ,
ಕಾಂದೇ ಮೋರ ಪ್ರಿಯಾ, ಅಹೋರಹಾ"

(ಓ ನನ್ನ ಸುಂದರಾ, ನಿನಗೆ ನಮಸ್ಕಾರ,
ನೀನು ಅಳುತಿದೀಯೆ, ನಾನು ಅಳುತಿದೇನೆ,
ನನ್ನ ಕಾದಲೆಯೂ ಕೂಡ ಅಳುತಿದಾಳೆ,
ಅಹೋರಾತ್ರಿ ಅಳುತಿದಾಳೆ.)

ಇದರಲ್ಲಿ ಕವಿಯ ಆಶಯವೇನೆಂಬುವದನ್ನು ಸ್ಫುಟವಾಗಿ ಬೇರೆ ಶಬ್ದಗಳಲ್ಲಿ ಹೇಳಲಿಕ್ಕೆ ಬರುವಂತಿಲ್ಲವೆಂಬದು ನಿಜ. ಆದರೆ ಅದರಲ್ಲೊಂದು ಜೀವಭಾವವಿದೆ, ಪ್ರೇಮ ಭಾವವಿದೆ, ಕೈಗೆ ನಿಲುಕದ ಯಾವುದಕ್ಕೊ ಕೈ ಚಾಚುತ್ತಿದೆ ಎಂಬದು ಸಂಶಯಕ್ಕೆಡೆಯಿಲ್ಲದಂತೆ ಕಂಡುಬರುತ್ತದೆ. ಮತ್ತು ಕೈಗೆ ಸಿಕ್ಕದ ಆ ಗುರಿ ಸುಂದರತೆಯ ಕಲ್ಪನೆಯೊಡನೆ ಬೇರ್ಪಡಿಸಲಾಗದಂತೆ ಹೊಂದಿಕೊಂಡಿದೆ. "ಸುಂದರ ಆಮಾರ" ಎಂಬ ಎರಡು ಶಬ್ದಗಳೇ ಅದರ ಬೀಜ.

ಇದೇ ಸಂಕಲನದಲ್ಲಿಯ ಎರಡನೆಯ ಮಹತ್ತ್ವದ ಕವಿತೆ 'ಅನಾಮಿಕಾ' ಎಂಬದರಲ್ಲಿ ಪ್ರೇಮವೆಂಬ ನಿಗೂಢವಾದ ಕಲ್ಪನೆಯನ್ನು ಒಳಹೊಕ್ಕು ನೋಡುವ ಪ್ರಯತ್ನವಿದೆ. ಪ್ರೇಮಕ್ಕೆ ಪಾತ್ರರು ಅನೇಕರಾದರೂ ಪ್ರೇಮವೆಂಬುವದು ಒಂದೇ. ತೋರಿಕೆಗೆ ಇಲ್ಲಿ ನಜರುಲ್ ವಿವರಿಸುವದು ಕಾಮವೆಂದೂ ಜೀವನದ ದಾರಿಗೆ ಬೆಳಕಾಗ ಬಲ್ಲ ಪ್ರೇಮವಲ್ಲವೆಂದೂ ಅನ್ನಿಸಬಹುದು. ಆದರೆ ಇಲ್ಲಿ ನಜರುಲ್ ಕಲ್ಪನೆಯ ಪ್ರೇಮ ಹೆಚ್ಚು ಅಮೂರ್ತವಾದದ್ದು, ಎಲ್ಲೆ ಕಟ್ಟುಗಳನ್ನು ಮೀರಿದ್ದು ಭವ್ಯವಾದದ್ದು. 'ದಾರಿದ್ರ್ಯ' ಎನ್ನುವ ಕವಿತೆ ಮಹತ್ತ್ವದ್ದೆನ್ನುವದಕ್ಕೆ ಕಾರಣವೆಂದರೆ ಅದು ನಜರುಲ್‌ನ ಕಲ್ಪನಾ ಪ್ರಪಂಚಕ್ಕೂ ವಾಸ್ತವ ಪ್ರಪಂಚಕ್ಕೂ ಸಂಪರ್ಕವನ್ನು ಕಲ್ಪಿಸುವ ಕೊಂಡಿಯಂತಿದೆ. ದಾರಿದ್ರ್ಯವು ಕವಿಯನ್ನು ಅವನು ಹುಡುಕಿಕೊಂಡು ಹೊರಟ ದಾರಿಯಿಂದ ಕದಲಿಸಲಾರದು. "ಸುಂದರ" ಅವನ ಕೈಬಿಡಲಾರದು. ದಾರಿದ್ರ್ಯವು ಕ್ರಾಂತಿಯ ಮಾರ್ಗದಲ್ಲಿ ನಡೆದು ಅಸತ್ಯವಾದದ್ದನ್ನೂ ಅಸುಂದರ ವಾದದ್ದನ್ನೂ ನಾಶಮಾಡುವದು. ಶೆಲ್ಲಿ ಕವಿಯೂ ಹೇಳುವಂತೆ—

'ಸಂದೆಗಳೆ ಎಡೆ ಬೇಡ
ಸುಂದರನ ದೂತಿಯರು ದಿಕ್ಕು ದೆಸೆಗಳಲೆಲ್ಲ
ಹಾಡುವರು ಯೌವನದ ವಿಜಯಗೀತವನು
ಅಂದವಲ್ಲದ್ದೆಲ್ಲ ಸತ್ಯವಲ್ಲದ್ದೆಲ್ಲ ನಶಿಸಿಹೋಗಲಿ
ಇಳಿದು ನರಕದಾಳಕ್ಕೆ
ಬಾ ಎನ್ನ ಆನಂದ, ಬಾ ಎನ್ನ ಸುಂದರ,
ಪುಟಿದು ಬಾ ಓ ನನ್ನ ಬೆಳಕೇ!"

ನಜರುಲ್‌ನ ಈ ಮೂರು ಕವಿತೆಗಳಲ್ಲಿ ಜೀವನದ ಗುರಿ ಸುಂದರ, ಅದರತ್ತ ನಡೆಯುವದಕ್ಕೆ ಪ್ರೇರೇಪಿಸುವದೇ ಪ್ರೇಮ. ವ್ಯಕ್ತಿಜೀವನದಲ್ಲಿ ಕವಿ 'ಮುಳ್ಳಮೇಲೆ ಮಲಗಿದ್ದರೂ,' ಮಾನವ ಜಾತಿಯ ಪ್ರತಿನಿಧಿಯೆಂದು ಅವನಿಗೆ ಒಂದು ದಿನ

ಗುರಿಯು ಕೈಗೆ ನಿಲುಕುವುದೆನ್ನುವುದರಲ್ಲಿ ಸಂದೇಹವಿಲ್ಲ; ಯಾವ ಕ್ರಾಂತಿಸಾಧನೆಗೆ ಅವನು ಪಣತೊಟ್ಟಿರುವನೋ ಅದು ಬಂದೇ ತೀರುವದು; ಅದರಿಂದಲೇ ಸುಂದರ, ಆನಂದ, ಬೆಳಕು, ಜನಜೀವನದಲ್ಲಿ ಕಾಣಿಸಿ "ಪ್ರಪಂಚದ ಮಹಾಯುಗ"ವು ಆರಂಭವಾಗುವದು.

ಎಂಟು ವರ್ಷಗಳ ತರುವಾಯ ಬಂದಿತು 'ಆಮೂರ ಸುಂದರ' ಎಂಬ ಗದ್ಯ ಕಾವ್ಯ. ಈ ಅವಧಿಯಲ್ಲಿ ಅವನು ಅನುಭವಿಸಿದ ಕಷ್ಟನಷ್ಟಗಳಿಂದ ಅವನ ಚಂಚಲವಾಗಿದ್ದ ಕಾತರವಾಗಿದ್ದ ಮನಸು ಒಂದು ನಿರ್ಧಾರವನ್ನು ತಲುಪಿತ್ತು—ತನ್ನ ಜೀವನವನ್ನು ತಿದ್ದಿ ತೀಡಿ ರೂಪಿಸುತ್ತ ಬರುತ್ತಿದ್ದ 'ಶಕ್ತಿ'ಯನ್ನು ಎದುರಿಸಿ ಕಾಣಬೇಕೆಂದು. ಇದೇ ಸುಮಾರಿಗೆ ಜ. ಎ. ಕೆ. ಫಜಲುಲ್ ಹಕ್ಕರು ಮತ್ತೆ ಆರಂಭಿಸಿದ 'ನವಯುಗ' ಪತ್ರಿಕೆಯಲ್ಲಿ ಕೆಲಸಮಾಡುವದಕ್ಕೆ ಅವನಿಗೆ ಕರೆ ಬಂದಿತು. ಹಿಂದೂ—ಮುಸ್ಲಿಮರಲ್ಲಿ ಒಗ್ಗಟ್ಟು ಸಾಧಿಸುವದು ಆ ಪತ್ರಿಕೆಯ ಉದ್ದೇಶವಾಗಿತ್ತು. ಇದೇ ಪತ್ರಿಕೆಯಲ್ಲಿ ಬ, ಸ, 1352 ಜ್ಯೇಷ್ಠ 17 ನೆಯ ದಿನ (1945 ಮೇ ಮಧ್ಯದಲ್ಲಿ) ನಜರುಲ್ ತನ್ನ 'ಆಮಾರಸುಂದರ'ವನ್ನು ಪ್ರಕಟಿಸಿದನು. ಅದು ಅವನ ಶ್ರದ್ಧೆಯ ನಿರೂಪಣವಾಗಿತ್ತು, ಆತ್ಮನಿವೇದನವಾಗಿತ್ತು. ತನ್ನ ಜೀವನದ ಉದ್ದಕ್ಕೂ ಅವನು ನಡೆಸುತ್ತಿದ್ದ ಅನ್ವೇಷಣವೂ ಕೊನೆಯಲ್ಲಿ ಅವನಿಗಾದ 'ಜೀವನ ದೇವತೆ'ಯ ಸಾಕ್ಷಾತ್ಕಾರವೂ ಅದರಲ್ಲಿವೆ. ಟಾಗೋರರ 'ಜೀವನ ದೇವತಾ' ಕವನಗಳಲ್ಲಿ ಕಂಡು ಬರುವ ಸ್ಪಷ್ಟತೆ ಸುಸಂಬದ್ಧತೆಗಳು ಇಲ್ಲಿ ಕಾಣುವುದಿಲ್ಲವಾದರೂ, ಇದೊಂದು ಅಪರೂಪವಾದ ಕಲಾಕೃತಿ. ನಜರುಲ್‌ನ ಜೀವನ ಮತ್ತು ಕಲೆಯ ರಹಸ್ಯವನ್ನು ಬಿಡಿಸುವ ಬೀಗದ ಕೈ ಇದರಲ್ಲಿದೆ.

ನಜರುಲ್ ಹೇಳುತ್ತಾನೆ: "ನನ್ನ ಸುಂದರನು ಮೊದಲು ನನ್ನ ಬಳಿಗೆ ಒಂದು ಸಣ್ಣಕತೆಯ ರೂಪಿನಿಂದ ಬಂದನು; ಆ ಮೇಲೆ ಸಂಗೀತದಲ್ಲಿ ರಾಗವಾಗಿ, ತಾಳವಾಗಿ, ಶಬ್ದಬಂಧವಾಗಿ, ಕಲ್ಪನೆ ಸಾಕಾರವಾಗಿ ಬಂದನು.... ಆ ಮೇಲೆ ಈ ನವಯುಗದಲ್ಲಿ 'ಶಕ್ತಿಸುಂದರ'ನಾಗಿ ಬಂದನು; ಕ್ರಾಂತಿ ಬಂಡಾಯಗಳ ಘೋಷಣೆಗಳನ್ನು ಕೂಗುತ್ತ ಭಯಂಕರವಾದ ಬೆಳಕನ್ನು ಸೂಸುತ್ತ ಬಂದನು." ಇದರ ತರುವಾಯ ನಜರುಲ್ ಜನತೆಯೊಡನೆ ಒಂದಾಗಿ ಕಾದಿ ಬ್ರಿಟಿಶ ಆಳರಸರ ಜೈಲಿನಲ್ಲಿ ಸೇರಿದ್ದಾಯಿತು. "ಆಗ ನಾನು ಬರೆಯುತ್ತಿದ್ದದ್ದು ನನ್ನದೆಂದು ನನಗೆ ತೋರುತ್ತಲೇ ಇರಲಿಲ್ಲ; ಅದೆಲ್ಲ ನನ್ನ 'ಪ್ರತಿಭಾನ ಸುಂದರ'ನ ಬರೆವಣಿಗೆಯಾಗಿದ್ದಿತು." ಆ ಮೇಲೆ ಎಂಟು ವರ್ಷಗಳಕಾಲ ತಾನು ಬಂಗಾಲದ ಹಳ್ಳಿಯಿಂದ ಹಳ್ಳಿಗೆ ನಗರದಿಂದ ನಗರಕ್ಕೆ ಅಲೆದಾಡಿದ ಕತೆಯನ್ನು ಹೇಳುತ್ತಾನೆ. "ಆಗ ನನಗೆ ಕಂಡದ್ದೇನೆಂದರೆ ನಾನು 'ಪ್ರತಿಭಾನ ಸುಂದರ'ನೆಂದು ಆರಾಧಿಸಿದ್ದು ನನ್ನ ಮಾತೃ ಭೂಮಿಯೇ ಆಗಿದ್ದಿತು. ನಾನು ಹುಟ್ಟಿಬಂದದ್ದೇ ಮನುಷ್ಯಮಾತ್ರರನ್ನೆಲ್ಲ ಪ್ರೀತಿಸುವದಕ್ಕಾಗಿ ಎಂದು ನನಗೆ ಅನ್ನಿಸಹತ್ತಿತು. ಅದರಲ್ಲಿ ಜಾತಿ ಪಂಥಗಳ ಭೇದಕ್ಕೆ ಎಡೆಯಿರಲಿಲ್ಲ. ಮುಂದೆ ನನಗಾದ ಸಾಕ್ಷಾತ್ಕಾರವು 'ತರುಣ ಸುಂದರ'ನೆಂದು, ಆ ಮೇಲೆ 'ಪ್ರೇಮ ಸುಂದರ'ನೆಂದು. ಅಂದಿನವರೆಗೆ ನನಗೆ 'ಪ್ರತಿಭಾನಸುಂದರ'ನಾಗಿ

ಕಂಡದ್ದು ಈಗ 'ಶೋಕ ಸುಂದರ'ನಾಗಿ ಪ್ರತ್ಯಕ್ಷವಾಯಿತು." ನಜರುಲ್ ತನ್ನ ಮಗನಲ್ಲಿ 'ವಾತ್ಸಲ್ಯ ಸುಂದರ' ನನ್ನು ಕಂಡಿದ್ದನು. ಆ ಮಗು ತೀರಿಹೋದಾಗ ಅದರೊಡನೆಯೇ ಅವನ ಆನಂದ, ಉಲ್ಲಾಸ, ಕವಿತೆ, ಹಾಡು, ಎಲ್ಲವೂ ಮರೆಯಾದವು. "ನಾನು 'ಶೋಕ ಸುಂದರ'ನನ್ನು ಕಂಡದ್ದು ಹೀಗೆ," ಎನ್ನುತ್ತಾನೆ.

ಆ ಸಂಕಟವನ್ನು ತಾಳಲಾರದೆ ಅವನು ಉರಿದೆದ್ದು ಕೇಳುತ್ತಾನೆ "ಇಂತಹ ಕ್ರೂರಿಯಾದ ವಿಧಾತನು ಯಾರು? ಅವನು ನನ್ನ 'ಶಿಶು-ಸುಂದರ'ನನ್ನು ಏತಕ್ಕಾಗಿ ಸೆಳೆದೊಯ್ದನು? ಧಿಕ್ಕಾರ! ಧಿಕ್ಕಾರ! ನನ್ನ ಗೆಳೆಯನೊಬ್ಬ ಹೇಳಿದನು ಚಿಂತಿಸು, ಚಿಂತಿಸುತ್ತಿರು, ನೀನಿನ್ನೂ 'ಪ್ರಲಯ ಸುಂದರ'ನನ್ನು ಕಾಣಬೇಕಾಗಿದೆ."

ಈ 'ಪ್ರಲಯ ಸುಂದರನ' ಸಾಕ್ಷಾತ್ಕಾರಕ್ಕಾಗಿ ಅವನು ಅತ್ತನು, ಕೊರಗಿದನು. ಕುರಾನವನ್ನೂ ವೇದಾಂತವನ್ನೂ ಓದಿದನು. ಅವನ ಕವಿತೆಯಲ್ಲಿಯೂ ಬಂಡಾಯದಲ್ಲಿಯೂ ಕೇಳಿಬರುವ ಚೆಲುವಿನ ದನಿಯು ತನ್ನ ಪೂರ್ವ ಸ್ಮೃತಿಯು ದೆಂದು ಕಂಡುಕೊಂಡನು. ಅದು ತನ್ನ ಸಖನಾಗಿ ಯಾವಾಗಲೂ ತನ್ನೊಡನೆ ಇರುತ್ತಿರುವದೆಂದು ಅನುಭವಿಸಿದನು. ಎಚ್ಚತ್ತು ತನ್ನ ಅಧ್ಯಯನವನ್ನು ಮುಂದರಿಸಿದನು. ಮುಗಿಲಿನ ತೆರೆ ಸರಿದಂತಾಯಿತು. "ಸ್ವರ್ಣಪ್ರಭಾ ಸುಂದರ'ನ ದರ್ಶನವನ್ನು ಮೊದಲನೆಯ ಬಾರಿ ನಾನು ಕಂಡೆನು."

ಇಷ್ಟರಲ್ಲಿ ಯಾವುದೋ ಒಂದು ಭಯಂಕರವಾದ ಶಕ್ತಿ ಅವನ ಕಾಲನ್ನು ಹಿಂದೆಳೆಯಿತು: "ಮರುಳೇ, ನಿನ್ನ ಮಾತೃಭೂಮಿಗೆ ಸಲ್ಲಬೇಕಾದ ಋಣವನ್ನು ತೀರಿಸದೆ ನೀನು ಎಲ್ಲಿ ಹೋಗುವೆ?" ಎಂದಿತು. ಆದಕಾರಣ "ನಾನು ಮರಳಿ ಈ ಲೋಕಕ್ಕೆ ಬಂದೆನು." ಕವಿಯು ಇಲ್ಲಿಯ ಕಷ್ಟದಿಂದ ಪಾರಾಗಿ ಹೋಗುವದಕ್ಕೆ ಯತ್ನಿಸಿದಷ್ಟು ಸಲವೂ ಅವನಿಗೆ ಬಲವಾದ ಪೆಟ್ಟುಗಳು ಬಿದ್ದವು. ಅವನ ಹೆಂಡತಿ ಹಾಸಿಗೆ ಹಿಡಿದಳು. ಹಣವೆಲ್ಲ ತೀರಿತು. ಸಾಲದ ಭಾರವು ಹೊರಲಾಗದಷ್ಟು ಹೆಚ್ಚಿತು. ಆಗ ಅವನೆಂದೂ ಕಾಣದಿದ್ದ ಸಖನೊಬ್ಬ ಅವನ ಒಳಗಣ್ಣನ್ನು ತೆರೆಯಿಸಿದನು. ಕವಿದಿದ್ದ ಮಬ್ಬು ಹರಿಯಿತು. "ನನ್ನ ತಾಯಿ ಭೂದೇವಿಯ ಕರೆಗೆ ಓಗೊಟ್ಟೆ. ಅವಳನ್ನು ಅಕ್ಕರೆಯಿಂದ ಬಿಗಿದಪ್ಪಿದೆ . . . ಭಾರತದ ಬಂಗಾಲದ ಬಡತನವನ್ನೂ ದಬ್ಬಾಳಿಕೆಯನ್ನೂ ನೋಡಿ ಮರುಗಿದೆ." ಆಗಲೇ ಅವನು ಮಾಡಿದ ಘೋಷಣೆ ಎಂದರೆ ತನಗೆ ದೇವರು ಬೇಡ ಮುಕ್ತಿ ಬೇಡ ತನ್ನ ಮಾತೃಭೂಮಿಗೆ ದಾಸ್ಯದಿಂದ ಬಿಡುಗಡೆ ದೊರೆಯುವ ವರೆಗೆ ತನಗೆ ಇನ್ನಾವುದೂ ಬೇಡ.

ಈ ರೀತಿಯಾಗಿ ಅವನು ಮರಳಿ ತಾನು ಹುಟ್ಟಿದ ನೆಲಕ್ಕೆ ಬಂದನು. ಎಲ್ಲೆಲ್ಲಿಯೂ ಅರಳಿ ಬಾಡಿಹೋಗುವ ಹೂವುಗಳಲ್ಲೆಲ್ಲ ಅವನು "ಪುಷ್ಪ ಸುಂದರ"ನನ್ನು ಕಂಡನು. ಹರಿಯುವ ಹೊಳೆ, ಸುಳಿಯುವ ಗಾಳಿ, ನೀಲವಾದ ಆಕಾಶಗಳೆಲ್ಲ ಅವನನ್ನು ಒಡಹುಟ್ಟಿದವರಂತೆ ಕೈಮಾಡಿ ಕರೆದವು. ಆ ಮೇಲೆ ಬಂದಿತು ಬಿರುಗಾಳಿ, ಕಪ್ಪಗಾಗಿ, ಭೀಷಣವಾಗಿ ಬಂದಿತು. ಬಂದು ಕರುಣೆಯಿಂದ ನುಡಿಯಿತು "ನಾನೇ ಪ್ರಲಯ ಸುಂದರ."

ಕವಿಯ ಮಸುಕಾಗಿದ್ದ ದೃಷ್ಟಿ ಮತ್ತೆ ಸ್ವಚ್ಛವಾಯಿತು. "ಸೃಷ್ಟಿ ಸುಂದರ"ನು ಅವನಿಗೆ ಪ್ರತ್ಯಕ್ಷನಾಗಿದ್ದನು. ಅವನು ಪೂರ್ಣತೆಯನ್ನು ಕೊಡುವೆನೆಂದನು, ಆದರೆ ಮೊದಲು ಕವಿಯು ತನ್ನ ಕರ್ತವ್ಯವನ್ನು ಈಡೇರಿಸಲಿಕ್ಕೆ ಬೇಕು. ಮಾನವ ಪ್ರಪಂಚದಲ್ಲಿ ಮರೆಯಾಗಿದ್ದ ಶುಚಿ-ಸುಂದರತೆಗಳನ್ನು ಮರಳಿ ಪಡೆಯುವದಕ್ಕೆ ಅವಿರತವಾಗಿ ಹೆಣಗಬೇಕು.

"ತಥಾಸ್ತು" ಎಂದು ಕವಿಯು ಈ ಕಾವ್ಯವನ್ನು ಮುಗಿಸುತ್ತಾನೆ.

ಇದರಲ್ಲಿ ಕವಿಯು ತನ್ನ ಜೀವನದ ಗಟ್ಟಗಳನ್ನು ಒಂದೊಂದಾಗಿ ನೆನಿಸಿಕೊಳ್ಳುತ್ತಾನೆ. ಈ ಯಾತ್ರಿಕನ ದಾರಿಯು ಚಿಂತನೆ ವೈಯಕ್ತಿಕ ಅನಾಸಕ್ತಿಗಳ ಮಾರ್ಗದಲ್ಲಿ ನಡೆದು, ಮಾನವ ಪ್ರಪಂಚವು ಪ್ರತ್ಯಕ್ಷದಲ್ಲಿ ತಲುಪಬೇಕಾಗಿದ್ದ ಗುರಿಗಳನ್ನು ಕಂಡು, ಮಾತೃಭೂಮಿಯ ಮತ್ತು ಮಾನವ ಪ್ರಪಂಚದ ಸೇವೆಯನ್ನು ಬಿಟ್ಟರೆ ಬೇರೆ ಗತಿ ಇಲ್ಲವೆಂಬ ನೆಲೆಗೆ ಬಂದು ನಿಲ್ಲುತ್ತದೆ.

ಇದರಲ್ಲಿ ವಿವರಿಸಲಾದ ಬೇರೆ ಬೇರೆ ಗಟ್ಟಗಳ ಕಲ್ಪನೆ ಸುಸ್ಪಷ್ಟವಾಗಿಲ್ಲ. ಒಂದು ಗಟ್ಟದಿಂದ ಇನ್ನೊಂದು ಗಟ್ಟಕ್ಕೆ ಸಾಗುವ ದಾರಿ, ಸುಲಭವಾದ 'ನಾಸ್ತಿ' ಕಲ್ಪನೆಯಿಂದ ಜಟಿಲವಾದ ಅಗಣಿತಗುಣಪೂರ್ಣವಾದ 'ಅಸ್ತಿ' ಕಲ್ಪನೆಗೆ ಸಾಗುವ ತರ್ಕ ವಿಶದವಾಗಿಲ್ಲ. ಕವಿಯು ಶೋಧಿಸಿದಂತೆ ಯೋಗದ ರಹಸ್ಯಗಳನ್ನು ಶೋಧಿಸಿದವರಿಗೆ ವಿಶದವಾಗುವಂತಿದ್ದರೆ ನಮಗೆ ತಿಳಿಯದು. ಆದರೂ ಕವಿಯು ತನ್ನ ಜೀವನದಲ್ಲಿ ಎದುರಿಸಿದ ಘಟನೆಗಳ ಮತ್ತು ಮಾಡಿದ ವಿಚಾರಗಳ ವಿವರಗಳು ಸಾಕಷ್ಟು ಸ್ಫುಟವಾಗಿವೆ. ನಜರುಲ್ ಶೋಧಿಸುತ್ತಿದ್ದದ್ದು "ಸುಂದರತೆ." ಕೊನೆಯಲ್ಲಿ ಪ್ರಪಂಚವನ್ನೆಲ್ಲ ಇದ್ದಕ್ಕಿದ್ದಂತೆ ಒಪ್ಪಿ ಅದರೊಡನೆ ಹೆಣಗದೆ ಸರ್ವವ್ಯಾಪಿಯಾದ ಸುಂದರತೆ ಸಾಕಾರವಾಗದೆಂದು ಅವನ ಅಭಿಪ್ರಾಯವೆಂದು ತೋರುತ್ತದೆ. ಜೀವನದಲ್ಲಿ ಸಾಧಿಸಬೇಕಾದದ್ದು ಮಾತೃಭೂಮಿಯ ಸೇವೆ, ಮಾನವತೆಯ ಸೇವೆ. ಇದೇ ಪರಮೋಚ್ಚವಾದ ಧ್ಯೇಯ. ನಜರುಲ್ ತನ್ನನ್ನು ನಿವೇದಿಸಿಕೊಂಡದ್ದು ಇದಕ್ಕೆಯೆ.

ಇದು ಶ್ರದ್ಧೆ ಸುಂದರತೆಗಳ ನಿವೇದನ ಮಾತ್ರವಲ್ಲ. ಇದರ ಮುಖ್ಯವಾದ ಸಂದೇಶ ಮಾನವ ಜಾತಿಯ ಕಲ್ಯಾಣದಲ್ಲಿ ಆಸಕ್ತಿ.

# ಗ್ರಂಥಸೂಚಿ

ನಜರುಲ್‌ನ ಮುಖ್ಯ ಕೃತಿಗಳನ್ನೂ ಈ ವರೆಗೆ ತಿಳಿದಿರುವ ಮಟ್ಟಿಗೆ ಅವು ಮೊದಲು ಪ್ರಕಟವಾದ ದಿನಗಳನ್ನೂ ಪ್ರಬಂಧದಲ್ಲಿಯೇ ಸೂಚಿಸಲಾಗಿದೆ. ಕವಿಯು ಮನೋವೈಕಲ್ಯಕ್ಕೊಳಗಾಗಿ ಮೌನವನ್ನಪ್ಪಿದ ತರುವಾಯದಲ್ಲಿಯೂ ಕೆಲವು ಗದ್ಯ ಪದ್ಯ ಕೃತಿಗಳು ಪ್ರಕಟವಾಗಿವೆ. ಆದರೆ ಎಲ್ಲವೂ ಸಿಕ್ಕಿವೆ ಎಂದಾಗಲಿ ಪ್ರಕಟವಾಗಿವೆ ಎಂದಾಗಲಿ ಹೇಳುವಂತಿಲ್ಲ.

ಪ್ರಬಂಧದಲ್ಲಿ ಹೆಸರಿಸದೆ ಉಳಿದಿರುವ ಕೆಲವು ಮುಖ್ಯ ಪ್ರಕಟನೆಗಳು :

**ಕಾವ್ಯ:** ಸಂಚಯನ (1955) ; ಮರುಭಾಸ್ಕರ (1957) ; ಶೇಷ ಸೌಗಾತ (1948)

**ಗದ್ಯ:** ನಜರುಲ್ ರಚನಾ ಸಂಭಾರ (ಎರಡು ಸಂಪುಟಗಳು : ಮೊದಲು ದೊರೆಯದೆ ಇದ್ದ ಕೆಲವು ಕವಿತೆಗಳೂ ಸೇರಿವೆ)

**ಗೀತಗಳು:** ಬುಲ್‌ಬುಲ್ (ಭಾಗ II 1952)

ಪ್ರಬಂಧದಲ್ಲಿ ಸಾಕಷ್ಟು ವಿವರಗಳನ್ನು ಕೊಡದೆ ಉಳಿದಿರುವ ಕೃತಿಗಳು—

**ಕಾದಂಬರಿ:** ಬಂಧನ ಹಾರಾ (1927) ; ಮೃತ್ಯು ಕ್ಷುಧಾ (1930) ; ಕುಹೇಲಿಕಾ (1931)

**ನಾಟಕ:** ಆಲೇಯಾ (1925) ; ಮಧುಮಾಲಾ (1959) ; ಝಿಲಿ ಮಿಲಿ (1930)

**ಕವಿತೆ:** (ಮಕ್ಕಳಿಗಾಗಿ) ; ಝಿಂಗೇ ಫೂಲ (1926) ; ಸಾತಭಾಯಿ ಚಂಪಾ (1927)

**ಸಣ್ಣ ಕತೆಗಳು:** ವ್ಯಥಾರ ದಾನ (1921) ; ರಿಕ್ತೇರ ಬೇದನ (1925) ಸಿವುಲಿ ಮಾಲಾ (1931)

**ಅನುವಾದಗಳು:** ರುಬೈಯಾತ-ಇ-ಹಾಫಿಜ (1930) ; ಕಾವ್ಯ ಆಂಪರ (1933) ರುಬೈಯಾತ-ಇ-ಓಮರ ಖೈಯಾಮ (1960)

"ನಜರುಲ್‌ನ ಉತ್ತಮ ಕವಿತೆಗಳು" ಎಂಬ ಒಂದು ಸಂಕಲನದ ಪ್ರಕಟನೆಗೆ ಸಿದ್ಧತೆಗಳು ನಡೆದಿವೆ. ಅದು ಇಂಗ್ಲಿಷ ಮತ್ತು ಭಾರತದ ಮುಖ್ಯ ಭಾಷೆಗಳಲ್ಲಿ ಪ್ರಕಟವಾಗುವದು. ಪ್ರಕಾಶಕರು : ಸಾಹಿತ್ಯ ಅಕಾದೆಮಿ ಹೊಸ ದಿಲ್ಲಿ.

**ಅನ್ಯದೇಶ ಭಾಷೆಗಳಲ್ಲಿ:** ರಸಿಯನ್ ಭಾಷೆಯಲ್ಲಿ ಮತ್ತು ಇತರ ಸೋವಿಯತ್ ದೇಶಗಳ ಭಾಷೆಗಳಲ್ಲಿ ಕವಿತೆಗಳ ಸಂಕಲನವೊಂದು ಪ್ರಕಟವಾಗಿದೆ. ರಸಿಯನ್ 1970.

**ಹಿಂದೀ:** ನಜರುಲ್ ಬರೆಹಗಳನ್ನು ಕುರಿತ ಒಂದು ಪ್ರಬಂಧ. ಸುಮಾರು ಹತ್ತು ಕವಿತೆಗಳನ್ನು ಒಳಗೊಂಡಿದೆ. ಲೇಖಕರು : ಗೋಪಾಲ ಹಾಲ್ದಾರ. ಪ್ರಕಾಶಕರು : ರಾಷ್ಟ್ರಭಾಷಾ ಪರಿಷತ್. ವರ್ಧಾ.

**ಇಂಗ್ಲಿಷ:** ನಜರುಲ್ ಮತ್ತು ಅವನ ಕೃತಿಗಳನ್ನು ಕುರಿತ ಪ್ರಬಂಧಗಳು.

1. ಬಸುಧಾ ಚಕ್ರವರ್ತಿ—'ಕಾಜಿ ನಜರುಲ್ ಇಸ್ಲಾಮ' ಹೊಸದಿಲ್ಲಿ 1968.
2. ಕಾಜಿ ಅಬ್ದುಲ್ ವದೂದ : 'ಸೃಜನಶೀಲ ಬಂಗಾಲ' ಕಲಕತ್ತಾ.